ಏಪ್ರಿಲ್ 2020

* ನಾವು ಬದುಕುವುದು ಹೇಗೆ? ಆವಾಸವಿಲ್ಲದ ವನವಾಸಿ ಪ್ರಾಣಿಗಳ ಗೋಳಿನಕಥೆ! – ಉಷಾ ಪ್ರೀತಮ್, ಮಗ್ಗುಲ
* ಕನಕದಾಸರು ಕಂಡ ಚಕ್ರವಾಕ ಹಕ್ಕಿ – ಶಶಿಧರಸ್ವಾಮಿ ಆರ್. ಹಿರೇಮಠ
* ಹೊಳೆಯುವ ಕಪ್ಪೆಗಳು! – ಜೈಕುಮಾರ್ ಆರ್.
* ಯುಗಾದಿ (ಕವನ) – ಜನಾರ್ದನ ಗೊರ್ಟೆ
* ಪ್ರಕೃತಿ ಬಿಂಬ – ಭಗವತಿ ಬಿ. ಎಮ್., ಧನರಾಜ್ ಎಂ.


**ವಿನ್ಯಾಸ**

ಧನರಾಜ್ ಎಂ.

**ಮುಖಪುಟ ಛಾಯಾಚಿತ್ರ**

ಹಯಾತ್ ಮೊಹಮ್ಮದ್

**ಪರಿಷ್ಕರಣೆ**

ಮುರಳಿ ಎಸ್.

ಅನನ್ಯರೂಪ

**ಕರಡು ತಿದ್ದುಪಡಿ**

ಡಾ.ದೀಪಕ್ ಬಿ., ಮೈಸೂರು




# ತಾರೆ ಮರ

**ಸಾಮಾನ್ಯ ಹೆಸರು: Bedda nut tree**

**ವೈಜ್ಞಾನಿಕ ಹೆಸರು: *Terminalia bellirica***



© ನಾಗೇಶ್ .ಓ .ಎಸ್ — ತಾರೆ ಮರ, ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನ

ತಾರೆ ಎಂದೇ ಸಾಮಾನ್ಯವಾಗಿ ಕರೆಯಲ್ಪಡುವ ಈ ಮರ, ಎಲೆ ಉದುರುವ ಕಾಡುಗಳಲ್ಲಿ ಕಾಣಸಿಗುತ್ತವೆ. ಈ ಮರ ಹನ್ನೆರಡರಿಂದ ಹದಿನೆಂಟು ಮೀಟರ್ ಎತ್ತರಕ್ಕೆ ಬೆಳೆಯುತ್ತದೆ. ಇದರ ಎಲೆಗಳು ಎಂಟರಿಂದ ಇಪ್ಪತ್ತು ಸೆಂಟಿಮೀಟರ್ ಉದ್ದ ಹಾಗೂ ಏಳರಿಂದ ಹದಿನೈದು ಸೆಂಟಿಮೀಟರ್ ಅಗಲವಿರುತ್ತದೆ. ತಿಳಿ ಹಸಿರು ಬಣ್ಣದಲ್ಲಿರುವ ಎಲೆಗಳು ಚೂಪಾದ ಕೊನೆಯನ್ನು ಹೊಂದಿದ್ದು, ಎಲೆಗಳ ಮೇಲೆ ಸಣ್ಣ ಸಣ್ಣ ಚುಕ್ಕಿಗಳಿರುತ್ತವೆ. ಎಪ್ರಿಲ್- ಮೇ ತಿಂಗಳಲ್ಲಿ ಹಸಿರು ಮಿಶ್ರಿತ ಹಳದಿ ಬಣ್ಣದ ಹೂಗಳು ಬಿಡುತ್ತವೆ. ಸಾಮಾನ್ಯವಾಗಿ ಹೂಗಳು ಗೊಂಚಲು ಗೊಂಲಾಗಿದ್ದು (Infloresence) ಇದರಲ್ಲೆ ಗಂಡು ಹಾಗು ಹೆಣ್ಣು ಹೂಗಳಿರುತ್ತವೆ. ಹಳದಿ ಮಿಶ್ರಿತ ಬೂದು ಬಣ್ಣದ ಗೋಳಾಕಾರದ ಕಾಯಿಗಳನ್ನು ಬಿಡುತ್ತವೆ ಹಾಗೂ ಈ ಕಾಯಿಗಳು ಗಟ್ಟಿಯಾಗಿರುತ್ತವೆ. ಈ ತಾರೆ ಮರ ಭಾರತೀಯ ಹಿಂದು ಸಂಸ್ಕೃತಿಯಲ್ಲಿ ಪೂಜ್ಯನೀಯ ಸ್ಥಾನವನ್ನ ಪಡೆದುಕೊಂಡಿದೆ, ಹಾಗೂ ಭಾರತದ ಆಯುರ್ವೇದದಲ್ಲಿ ತಾರೆಮರ ವಿಶೇಷ ಸ್ಥಾನವನ್ನ ಪಡೆದುಕೊಂಡಿದೆ. ಪ್ರಸಿದ್ಧ ಆಯುರ್ವೇದ ರಸಾಯನವಾದ ತ್ರಿಫಲ ಚೂರ್ಣದಲ್ಲಿ ಈ ತಾರೆಮರದ ಕಾಯನ್ನ ಉಪಯೋಗಿಸುತ್ತಾರೆ. ಈ ಚೂರ್ಣವು ಹಲವಾರು ಕಾಯಿಲೆಗಳಿಗೆ ರಾಮಬಾಣವಾಗಿದೆ.



# ನಾವು ಬದುಕುವುದು ಹೇಗೆ? ಆವಾಸವಿಲ್ಲದ ವನವಾಸಿ ಪ್ರಾಣಿಗಳ ಗೋಳಿನಕಥೆ!

* ಉಷಾ ಪ್ರೀತಮ್, ಮಗ್ಗುಲ.

ಕೊಡಗು ಎಂದರೆ ಹಾಗೇ... ದಟ್ಟಕಾಡು, ಕಿರಿದಾದ ರಸ್ತೆಗಳು, ಕಾನನದ ಮಧ್ಯದಲ್ಲೊಂದು ಕಾಳಿಯದ್ದೋ, ಭಗವತಿಯದ್ದೋ ಮಂದಿರ, ಒಪ್ಪವಾದ ಮನೆಗಳು, ಅಲ್ಲೊಂದು ಪುಟ್ಟ ಕೈದೋಟ, ಕಾಫಿ ಹೂ ಅರಳಲು ಬಾ ಎಂದರು ಬಾರದೇ ಮುನಿಯುವ ಮಳೆ, ಮಳೆಗಾಲದಲ್ಲಿ ಧೋ ಎಂದು ಸುರಿಯುತ್ತಲೇ ಸಾಗುವ ಮಳೆ, ಚಳಿಗಾಲದಲ್ಲಿ ಕೊರೆಯುವ ಚಳಿ ಹೀಗೆ ಭೌಗೋಳಿಕವಾಗಿ, ಸಾಮಾಜಿಕವಾಗಿ ನಮ್ಮ ಜಿಲ್ಲೆ ಅಪ್ಪಟ "ಮಲೆಗಳಲ್ಲಿ ಮದುಮಗಳು".

ಇಂತಿರುವ ಈ ಕೊಡಗಿನಲ್ಲಿ ಹಿರೀಕರಿಗೆ ನೆನಪಾದರೆ ನೆನಪು ಮಾಡಿಕೊಳ್ಳಿ. ಕಾಫಿತೋಟದ ಮಧ್ಯದಲ್ಲಿ ಎಲ್ಲೋ ಆನೆ ಹೆಜ್ಜೆ, ದನಕಾಯುವವರಿಗೆ ಕಂಡ ಆನೆಯ ಲದ್ದಿ, ತೋಟದಲ್ಲಿ ಹಂದಿತೋಡಿದ ಮಣ್ಣು, ಕಾಡುಕುರಿಯ ಹಿಕ್ಕೆ ಇವೆಲ್ಲಾ ಬಲು ಅಪರೂಪಕ್ಕೆ ಸಿಗುತ್ತಿದ್ದ ದೃಶ್ಯಗಳಾಗಿದ್ದವು, ಕಾಫೀ ಕ್ಲಬ್ ಗಳಲ್ಲಿ, ತೋಟದ ಮಧ್ಯೆ ಎಲೆಗೆ ಸುಣ್ಣ ಒರೆಸುತ್ತಾ ಮಾತನಾಡುವ ರೋಚಕ ವಿಚಾರಗಳಾಗಿದ್ದವು. ಪಾಲೀಶ್ ಮಾಡಿಸಿಕೊಂಡು ತೂಗುಹಾಕಿದ ತೋಟದ ಕೋವಿಗೆ ಕೆಲಸವಿಲ್ಲದೆ ಮನೆಗಳಲ್ಲಿ ಮಲಗಿರುತ್ತಿದ್ದವು. ಕಾಡಿಗೆ ಹೋದ ದನಕರುಗಳು ಕ್ಷೇಮವಾಗಿಯೆ ಮನೆಗೆ ಹಿಂದಿರುಗುತ್ತಿದ್ದವು. ಕಾಡಿನ ಸವಕಲು ದಾರಿಯಲ್ಲಿ ಮೀನುಮಾರಲು ಬಂದವರು, ಸುರಕ್ಷಿತವಾಗಿಯೇ ಗೂಡು ಸೇರುತ್ತಿದ್ದರು. ನೋಡನೋಡುತ್ತಿದ್ದಂತೆಯೆ ಕೊಡಗು ಇಲ್ಲಿನ ಕಾಡು, ರಸ್ತೆ ಎಲ್ಲವು ಮಗ್ಗುಲು ಬದಲಾಯಿಸಿದಂತೆ ಕಾಣುತ್ತಿವೆ. ಜಿಲ್ಲೆಯಲ್ಲಿ ಇಡೀ ಪ್ರಾಕೃತಿಕ ಚಿತ್ರಣವೇ ಬದಲಾಗಿ ಹೋಗಿದೆ. ಆನೆಗಳು ಮನುಷ್ಯರು ಇರುವ ಜಾಗಕ್ಕೆ ಬಂದು ಧಮಕಿ ಹಾಕಿ ಹೋಗುತ್ತಿವೆ. ಅಷ್ಟೇ ಏಕೆ, ಭೀಕರವಾಗಿ ಕೊಂದು ಬೆನ್ನುತಿರುಗಿಸಿ ಹೋಗುತ್ತಿವೆ. ಹುಲಿಗಳು ಮಾರ್ಜಾಲ ನಡಿಗೆಯಲ್ಲಿ ಬಂದು ರಾಸುಗಳ, ಮನುಷ್ಯರ ರಕ್ತ ಹೀರಿಹೋಗುತ್ತಿವೆ. ಇತ್ತೀಚೆಗೆ ವನ್ಯಜೀವಿ ಸಪ್ತಾಹದ ದಿನವೇ ನಾಗರಹೊಳೆ ಅಭಯಾರಣ್ಯದಲ್ಲಿ ಹಿರಿಯ ಫಾರೆಸ್ಟ್ ಆಫೀಸರ್ ಮಣಿಕಂಟನ್, ಆನೆ ದಾಳಿಗೆ ಸಿಕ್ಕು ಮೃತಪಟ್ಟರು. ಬಸ್ಸಿನಲ್ಲೇ ತಿರುವು-ಮುರುವು ರಸ್ತೆಯಲ್ಲಿ ಮಡಿಕೇರಿಗೆ ಹೋಗಲು ಹಿಂದೇಟು ಹಾಕುವವರು ಇರುವಾಗ, ಆನೆಯೊಂದು ಜಿಲ್ಲಾಕೇಂದ್ರಕ್ಕೆ ಬಂದು ಏನೋ ಎಚ್ಚರಿಕೆಕೊಟ್ಟು ಹೋಗಿದೆ.

ಆನೆಗಳನ್ನು ಆಯಾಪ್ರದೇಶದ ಕಾಡಿನ ಸಮೃದ್ಧಿಯ ಸೂಚಕಗಳು ಎಂದು ಪರಿಸರ ತಜ್ಞರು ಕರೆಯುತ್ತಾರೆ. ಕಾರಣವಿಷ್ಟೇ, ಆನೆಗಳ ಸಂಖ್ಯಾಬಲ ಹೆಚ್ಚಾಗಿದ್ದು, ಕಾಡಾನೆಗಳು ತಮ್ಮ ಆವಾಸದಲ್ಲೇ ಆರಾಮವಾಗಿ ಜೀವಿಸುತ್ತಾ ಇವೆಯೆಂದರೆ, ಆ ಕಾಡು ಸಮೃದ್ಧವಾಗಿದೆ ಎಂದು ಅರ್ಥ. ಏಕೆಂದರೆ, ಆನೆಗಳಿಗೆ ಒಂದು ದಿನಕ್ಕೆ 450 ಕೆ.ಜಿ ಊಟ

ಬೇಕು. ಅದರಲ್ಲಿ ಸೊಪ್ಪು-ಸದೆ, ಹುಲ್ಲು, ಎಲೆಗಳು, ಹಣ್ಣುಗಳು, ಬೇರುಗಳು ಎಲ್ಲವೂ ಸೇರಿರಬೇಕು. ಕುಡಿಯಲು ಒಮ್ಮೆಗೆ ನೂರಾ ತೊಂಭತ್ತು ಲೀಟರ್ ನಷ್ಟು ನೀರು ಬೇಕು. ಇನ್ನು ನೀರಿನಲ್ಲಿ ಬೇಕೆಂದಾಗೇ ಆಟವಾಡಬೇಕು ಬೇರೆ. ಅಲ್ಲದೇ ಏಷ್ಯಾದ ಆನೆಯೊಂದು ಸಂಚರಿಸುವ ಪ್ರದೇಶದ ವ್ಯಾಪ್ತಿ ನೂರು ಕಿಲೊಮೀಟರ್ ನಿಂದ ಸಾವಿರ ಕಿಲೊಮೀಟರ್ ನಷ್ಟು ವಿಸ್ತೀರ್ಣ. ಇಷ್ಟು ವಿಸ್ತಾರವಾದ ಜಾಗದಲ್ಲಿ ಎಲ್ಲೋ ಒಂದುಕಡೆ ತನಗೆ ಬೇಕಾದ ಹುಲ್ಲು, ಮತ್ತೆಲ್ಲೋ ನೀರುಕುಡಿದು ಕಾಡಿನ ಎಲ್ಲೆಯಲ್ಲಿ ಆನೆಗಳು ಆರಾಮವಾಗಿ ಇರುತ್ತಿದ್ದವು. ಹೀಗೆ ಆನೆಗಳು ಕಾಡಿನಿಂದಾಚೆಗೆ ಹಾಜರಿ ಹಾಕದೇ ಇದ್ದಾಗ ಕಾಡು ತುಂಬಾ ಚೆನ್ನಾಗಿದೆ ಎಂದು ಅರ್ಥವಾಗುತ್ತಿತ್ತು. ಆದರೆ, ಕಾಡಿನಂಚಿನಲ್ಲಿ ಮನುಷ್ಯನ ಅಗಾಧವಾದ ಚಟುವಟಿಕೆಗಳು, ದಿನಕ್ಕೊಮ್ಮೆ ಬದಲಾಗುವ ಸರ್ಕಾರದ ಭೂಪರಿವರ್ತನಾ ನಿಯಮಗಳು.... ಇವೆಲ್ಲವುಗಳ ಕಾರಣದಿಂದಾಗಿ ಕಾಡಿನ ಗಾತ್ರ ಚಿಕ್ಕದಾಗಿದೆ. ವಿಶಾಲವಾದ ಆಲದ ಮರದಂತಿದ್ದ ಕಾಡು ಇಂದು ಗಾತ್ರದಲ್ಲಿ ಕುಬ್ಜವಾಗಿದೆ. ಇದರಿಂದ ಆನೆಗಳಿಗೆ ಏನೋ ಅಸಹನೆ, ಕತ್ತುಕೊಂಕಿಸಿ ಕಾಡಿನಾಚೆಗೆ ನೋಡಿದ ಆನೆಗಳಿಗೆ ತಮ್ಮ ಜಾಗಕ್ಕೆ ಮನುಷ್ಯರು ಬಂದಿರುವುದು ಅರಿವಾಗಿದೆ. ಅಲ್ಲೆಲ್ಲೋ ಹುಲುಸಾಗಿ ಬೆಳೆದ ಭತ್ತ, ಬಾಳೆ, ಹಲಸು ಕಣ್ಣಿಗೆ ಬಿದ್ದಿದೆ. ಅಲ್ಲೇ ತೋಟದ ಮಧ್ಯೆ ಸ್ವಚ್ಛ ನೀರಿನಿಂದ ತುಂಬಿರುವ ಕೆರೆಯು ಕಂಡಿದೆ. ಒಮ್ಮೆ ಬಂದ ಆನೆಗಳು ಮತ್ತೊಮ್ಮೆ, ಮಗದೊಮ್ಮೆ ಬರಲಾರಂಭಿಸಿವೆ. ಬಂದು ವಾರಗಟ್ಟಲೇ, ತಿಂಗಳುಗಟ್ಟಲೆ ಅಲ್ಲೇ ಮೊಕ್ಕಾಂ ಹೂಡುವುದು ಕಲಿತಿವೆ.



ಹಾಗೇ ವಿಶ್ರಮಿಸುತ್ತಿರುವ ಜಾಗ ಆರ್.ಟಿ.ಸಿ ಮಾಡಿಸಿಕೊಂಡಿರುವ ತೋಟದ ಮಾಲೀಕನದ್ದು ಎಂದು ತಿಳಿಯದ ಆನೆಗಳು ತೋಟದ ಮಾಲೀಕನನ್ನು ಅತ್ಯಂತ ನಿರ್ದಯೆಯಿಂದ ಕೊಂದು ಹಾಕಿವೆ, ಕೂಲಿಕಾರ್ಮಿಕರನ್ನು ಇನ್ನಿಲ್ಲದ ಆಕ್ರೋಶದಿಂದ ಬಡಿದು ಸಾಯಿಸಿವೆ. ಕೊಡಗಿನಲ್ಲಿ ಇದುವರೆಗೂ ಹತ್ತು ವರ್ಷದ ಅಂತರದಲ್ಲಿ ಎಪ್ಪತ್ತೂರಕ್ಕೂ ಅಧಿಕ ಮಂದಿ ಕಾಡಾನೆ ದಾಳಿಯಿಂದ ಸಾವನ್ನಪ್ಪಿದ್ದಾರೆ. ಅಷ್ಟೇ ಪ್ರಮಾಣದ ಜನರು ಕೈ-ಕಾಲು ಕಳೆದುಕೊಂಡು ಅಂಗವೈಕಲ್ಯಕ್ಕೆ ತುತ್ತಾಗಿದ್ದಾರೆ. ನೂರಾರು ಮನೆಯ ಕೊಟ್ಟಿಗೆಯ ಜಾನುವಾರುಗಳು ಕಾಡಾನೆ, ಹುಲಿ, ಚಿರತೆ ದಾಳಿಗೆ ತುತ್ತಾಗಿವೆ.

ಇದು ಬರೇ ಕಾಡಾನೆ ದಾಳಿಯಿಂದ ಮನುಷ್ಯರಿಗೆ ಆಗಿರುವ ನಷ್ಟವಲ್ಲ. ಮನುಷ್ಯ ಜಗತ್ತಿನಿಂದಲೂ ಆನೆಗಳ ಮಾರಣ ಹೋಮವಾಗಿದೆ. ಭಾರತ ದೇಶವೊಂದರಲ್ಲೇ ಆನೆದಾಳಿಯಿಂದ ವರ್ಷಕ್ಕೆ ನಾಲ್ಕನೂರು ಮಂದಿ ಸಾವನ್ನಪ್ಪುತ್ತಾರೆ. ಅದೇ ರೀತಿ ವರ್ಷಕ್ಕೆ ನೂರು ಆನೆಗಳು ಸಾಯುತ್ತಿವೆ. ಅದೇ ನಮ್ಮ ನೆರೆರಾಷ್ಟ್ರ ಶ್ರೀಲಂಕಾದಲ್ಲಿ ವರ್ಷಕ್ಕೆ 70 ಮನುಷ್ಯರು, ಇನ್ನೂರು ಕಾಡಾನೆಗಳು ಸಾಯುತ್ತಿವೆ.

ಮಳೆಗಾಲದಲ್ಲಿ ತುಂಡಾಗಿ ಬಿದ್ದ ವಿದ್ಯುತ್ ತಂತಿ ತಗುಲಿ ಒಂದೇ ಬಾರಿಗೆ ಉಸಿರು ಚೆಲ್ಲಿದ ನಾಲ್ಕು ಮರಿಆನೆ, ರಸ್ತೆ ದಾಟುವಾಗ ಬಸ್ ಗೆ ಡಿಕ್ಕಿಯಾಗಿ ಸತ್ತ ರಂಗ, ಅನಾರೋಗ್ಯದಿಂದ ಇತ್ತೀಚೆಗೆ ಸಾಕಾನೆ ಶಿಬಿರದಲ್ಲಿ ನರಳಾಡಿ ಸತ್ತ ದಸರಾ ಆನೆ ದ್ರೋಣ. ಮನುಷ್ಯ-ವನ್ಯಜೀವಿ, ಎರಡು ಕಡೆಯೂ ಸಂಘರ್ಷ ತಾರಕಕ್ಕೇರಿದೆ. ಎರಡು ಕಡೆಯೂ ಸಾವು-ನೋವು, ಆವಾಸದ ಅತಿಕ್ರಮ ಪ್ರವೇಶ, ಆನೆಗಳ ಆಹಾರ, ಆವಾಸದ ನಾಶಮಾಡುವಿಕೆ, ಅದೇರೀತಿ ಕಾಡಾನೆಗಳು ಮನುಷ್ಯರ ಬೆಳೆ, ಪ್ರಾಣಿ, ಆವಾಸ ಎಲ್ಲವನ್ನು ಅಕ್ರಮವಾಗಿ ಪ್ರವೇಶಿಸಿ ತಾಳಲಾರದ ಹೊಡೆತ ಕೊಡುತ್ತಿವೆ.

ಕೊಡಗಿನಲ್ಲಿ ಈಗಿನ ತಲೆಮಾರಿಗೆ ಗದ್ದೆಗಳು ಅನ್ನದ ಬಟ್ಟಲಾಗಿ ಕಾಣುತ್ತಿಲ್ಲ, ಏಕೆ? ಮಳೆ ಸರಿಯಾದ ಸಮಯಕ್ಕೆ ಬಂದು ಕೃಷಿ ಇಲಾಖೆ ಕೊಟ್ಟ ಭತ್ತದ ಬೀಜಗಳು ನೆಟ್ಟಗೆ ನಿಂತರೆ ಬೆಳೆದವನ ಪುಣ್ಯ. ಅಷ್ಟೆಲ್ಲಾ ಆದಮೇಲೆ ಕೆಲಸಗಾರರನ್ನು ಹೊಂದಿಸಿ ಭತ್ತವನ್ನು ಕಣಕ್ಕೆ ತಂದಮೇಲೆ ಈಗಿನ ಕಾಲದ ಒಂದು ಬ್ರ್ಯಾಂಡೆಡ್ ಶೂ ಗೆ ಸಿಗುವ ಬೆಲೆಯೂ ರೈತನಿಗೆ ಸಿಗುವುದಿಲ್ಲ. ಹೇಗೋ ಏನೋ ಅಂತೂ ರೈತ ಭತ್ತವನ್ನು ಕೈಬಿಟ್ಟಿರಲಿಲ್ಲ. ಆದರೆ, ಕಾಡಾನೆಗಳು ಯಾವಾಗ ಸಸಿಮಾಡಲು ಹೋದಾಗ ಸಸಿಮಡುಗಳನ್ನು ಹಾಳುಗೆಡವಿದವೋ? ಅಂತೂ ಇಂತೂ ನಾಟಿಮಾಡಿ ಗೆದ್ದೇ ಎನ್ನುವಾಗ ಭತ್ತದ ಪೈರನ್ನೆಲ್ಲಾ ತುಳಿದು ಧ್ವಂಸಮಾಡಿದವೋ ಅವನ ಕೃಷಿಮಾಡಬೇಕೆನ್ನುವ ಕನಸು ಅಲ್ಲೇ ನಶಿಸಿತು. ಹೀಗೆ ಗದ್ದೆ ಮಾಡುವುದನ್ನು ಬಿಟ್ಟ ರೈತರು ಊರಿಗೆ ಹತ್ತುಮಂದಿ ಸಿಗುತ್ತಾರೆ. ಕೃಷಿ ಜಮೀನನ್ನು ಇವತ್ತಿನ ತಲೆಮಾರು ಹೆಂಡದಂಗಡಿ, ರೆಸಾರ್ಟು, ಬೇಕರಿ ಮಾಡುವುದು ಕಂಡಾಗ ಮನಸ್ಸಿನಲ್ಲಿ ಭೂಮಿಯನ್ನು ಕೈಬಿಟ್ಟಿದಕ್ಕಾಗಿ ದುಃಖವಾದರೂ ಬದುಕಿನಕಡೆ ಮುಖಮಾಡುತ್ತಿದ್ದಾನೆ ಅನ್ನಿಸುತ್ತದೆ. ವಾರಕ್ಕೊಂದು ಊರಿನಲ್ಲಿ ಗದ್ದೆಗಳು ಲೇಔಟ್ ಗಳಾಗಿ ಬದಲಾಗುತ್ತಿವೆ. ಜಿಲ್ಲೆಯೊಳಗೆ ಇಂಥದೊಂದು ಸಾಮಾಜಿಕ ಪಲ್ಲಟ ಸದ್ದಿಲ್ಲದೆ ನಡೆಯುತ್ತಿದೆ.



ನಮ್ಮಲ್ಲಿ ಹೇಗೆಂದರೆ ಕಾಡು, ಮರಗಳ ಹೊದಿಕೆ, ಮಳೆಮಾರುತ, ವನ್ಯಜೀವಿಗಳು, ಜೀವವೈವಿಧ್ಯ ಇವೆಲ್ಲವೂ ಸಮಾಜದ ಮುನ್ನೆಲೆಯಲ್ಲಿ ಯೋಚಿಸಬೇಕಾಗಿದ್ದ, ಚರ್ಚಿಸಬೇಕಾಗಿದ್ದ ವಿಚಾರಗಳಾಗಿದ್ದವು. ಆದರೆ, ದುರಾದೃಷ್ಟವಶಾತ್, ಮೆಟ್ರೋನಗರದ ಮಂದಿ ಟೀ ಶರ್ಟ್ ಮೇಲಿನ ಬರಹ, ವಾಟ್ಸಪ್ ಸ್ಟೇಟಸ್ ಇವುಗಳಲ್ಲೇ ತಮ್ಮ ಪರಿಸರ ಪ್ರೇಮ ಮೆರೆಯುತ್ತಿದ್ದಾರೆ.

ಈ ವರ್ಷ ಅತ್ಯಂತ ಕಠೋರ ಬೇಸಿಗೆಯನ್ನು ದೇಶದ ಮಹಾನಗರಗಳು ಕಂಡವು. ಆದರೆ, ಮಹಾನಗರದ ಕಾಂಕ್ರೀಟ್ ಸ್ವರ್ಗದಲ್ಲಿ ಕುಳಿತಮಂದಿ, ಬಿಸಿಲು ಕಡಿಮೆ ಮಾಡುವ ಕೂಲರ್ ಗಳು ಹೆಚ್ಚು ರೆಕ್ಕೆಯಿರುವ ಫ್ಯಾನ್ ಗಳಿಗೆ ಹುಡುಕಾಡಿದರೆ ವಿನಃ ಮನೆಯಾಚೆಗೆ ಹಲಸೋ, ಮಾವಿನಮರವೋ ಇದ್ದಿದ್ದರೇ ಮನೆಯೆಷ್ಟು ತಣ್ಣಗಿರುತ್ತಿತ್ತು ಎನ್ನುವ ಹಸಿರಿನಪಾಠ ಅವರಿಗೆ ನೆನಪೇ ಆಗುತ್ತಿಲ್ಲ. ನಮ್ಮ ಪರಿಸರದಿಂದ ಬಹುದೂರ ಹೋಗುತ್ತಿರುವ ಪಕ್ಷಿಗಳು, ಪ್ರಾಣಿಗಳು, ಅವು ನಮ್ಮನ್ನು ಕಾಡುವ ವಿಚಾರಗಳು ಅಲ್ಲವೇ ಅಲ್ಲ. ಆದರೆ, ಈ ನಡುವೆ ಎಲ್ಲೋ ಸಾಲುಮರದ

ತಿಮ್ಮಕ್ಕ ಮಾತ್ರ ತಮ್ಮ ಇಳಿವಯಸಿನಲ್ಲೂ ಮುಖ್ಯಮಂತ್ರಿಯವರನ್ನು ಭೇಟಿಮಾಡಿ ರಸ್ತೆ ಅಗಲೀಕರಣಕ್ಕೆ ಹನನವಾಗಲಿದ್ದ ಮರಗಳನ್ನು ಕಡಿಯದಂತೆ ಕೈ ಮುಗಿದು ಬೇಡಿದ್ದು ನೋಡಿದಾಗ ಮಾತ್ರ ಪರಿಸರದ ಬೆಲೆ ತಿಳಿದವರು ಇನ್ನೂ ಇದ್ದಾರಲ್ಲ ಎಂಬ ನಿರಾಳತೆ.



"ಕಾಡುಗಳನ್ನು ನಾಶಮಾಡಿದಾಗ ಅಲ್ಲಿರುವ ಪ್ರಾಣಿಗಳನ್ನು, ಅವುಗಳ ಪರಿಸರವನ್ನು ಧ್ವಂಸಮಾಡಿದಾಗ ರಹಸ್ಯ, ಗೌಪ್ಯ, ಅದ್ಭುತಗಳ ನಿರಂತರ ನಿಧಿಯೊಂದನ್ನು ನಮ್ಮ ಕಿರಿಯ ಜನಾಂಗ ಕಳೆದುಕೊಂಡಂತಾಗಿ ಮನಸ್ಸು ಖಿನ್ನವಾಗುತ್ತದೆ. ಈ ದುರಂತದ ದುಃಖವನ್ನು ಅಂಕಿ-ಸಂಖ್ಯೆಗಳ ಆಧಾರದ ಮೇಲೆ, ಸಿದ್ಧಾಂತಗಳ ಮುಖಾಂತರ ವಿಶ್ಲೇಷಿಸಿ, ಪರಿಸರ ಸಂರಕ್ಷಣೆಯ ಬಗ್ಗೆ ಜನಗಳಿಗೆ ಹೇಳಲು ಮನಸ್ಸೇ ಬರುವುದಿಲ್ಲ. ಏಕೆಂದರೆ ನಾನು ಕಂಡಂತೆ ಕಾಡನ್ನು ಕಂಡಿಲ್ಲದ, ಅನುಭವಿಸಿಲ್ಲದ ಮನಸ್ಸುಗಳಿಗೆ ನನ್ನ ಮನಸ್ಸಿನ ದುಗುಡವನ್ನು ನಿರ್ಜೀವ ಅಂಕಿ-ಸಂಖ್ಯೆಗಳ ವಿಶ್ಲೇಷಣೆ ಮೂಲಕ ಹೇಳಿ, ಹೇಗೆ ತಾನೇ ಪ್ರತಿಸ್ಪಂದನ ಉಂಟುಮಾಡಲಿ"– ಕೆ.ಪಿ. ಪೂರ್ಣಚಂದ್ರ ತೇಜಸ್ವಿ.

ಹೌದು, ಇಂಥ ಒಂದು ಪ್ರತಿಸ್ಪಂದನ ನಮ್ಮೊಳಗೆ ಆಗುತ್ತಲೇ ಇಲ್ಲ. ನಮಗಾದರೆ ಏಕಾಂಗಿಯಾಗಿರುವ ಜಾಗದಲ್ಲಿ ಮನೆಕಟ್ಟಬೇಕು ಅಂತೀವಿ, ಸಮುದ್ರತೀರದಲ್ಲಿ ಮನೆ, ಕಾಡಿನ ಮಧ್ಯೆ ನೀರಿನ ನಾದಕೇಳುವಲ್ಲಿ ರೇಸಾರ್ಟ್ ಇರಬೇಕು ಅಂತೀವಿ. ಹಾಗೇ ಪ್ರಾಣಿಗಳು ಅಲ್ವಾ? ಅವುಗಳಿಗೆ ಓಡಾಡಲು, ನಡೆದಾಡಲು, ಸಂತಾನೋತ್ಪತ್ತಿ ಮಾಡಲು ಜಾಗಬೇಕಲ್ವಾ? ಪ್ರಾಣಿಗಳ ಲೋಕದಲ್ಲಿ ಪ್ರತಿಪ್ರಾಣಿಗೂ ಒಂದು ಭೌಗೋಳಿಕ ವ್ಯಾಪ್ತಿಯನ್ನು, ಮೂತ್ರವಿಸರ್ಜಿಸುವ ಮೂಲಕ ಗುರುತು ಮಾಡಿಟ್ಟಿರುತ್ತವೆ. ಸಿಂಹ ಮತ್ತು ಹುಲಿಗಳಿಗೂ ಅಷ್ಟೆ ಮೊದಲು ಬೇಟೆಯನ್ನು ಯಾರು ತಿನ್ನಬೇಕು? ಹೇಗೆ ತಿನ್ನಬೇಕು ಎನ್ನುವುದಕ್ಕು ಅವುಗಳೇ ರೂಪಿಸಿಕೊಂಡ ನಡಾವಳಿಗಳಿರುತ್ತವೆ. ಆದರೆ ಅವೆಲ್ಲಕ್ಕೂ ಜಿಲ್ಲೆಯ ತುಂಬೆಲ್ಲಾ ಚಿಲಿಪಿಲಿಗುಟ್ಟುತ್ತಿರುವ ರೆಸಾರ್ಟ್ ಗಳು, ಹೋಂ ಸ್ಟೇಗಳಿಂದಾಗಿ ಈ ಜಿಲ್ಲೆಯಲ್ಲಿ ಪ್ರಾಣಿಗಳಿಗೆ ಜಾಗವೆಲ್ಲಿದೆ ಹೇಳಿ?.

ಎಲ್ಲಾ ಬೆಟ್ಟದಲ್ಲು ಟ್ರೆಕ್ಕಿಂಗ್ ಮಾಡುವವರು, ಬೋಳುಗುಡ್ಡದಮೇಲೆ ಕ್ಯಾಂಪ್ ಫೈರ್ ಮಾಡುವವರು, ಹರಿಯೋ ನೀರಲ್ಲಿ ಎಂಜಿನ್ ಚಾಲಿತ ರ್ಯಾಫ್ಟಿಂಗ್ ಮಾಡುವವರು, ಯಾವ ಜಲಚರ ಎಲ್ಲಿ ಉಸಿರಾಡಬೇಕು, ಯಾವ ಆನೆ ಯಾವ ದಾರಿಯಲ್ಲಿ ನಡೆಯಬೇಕು? ಅನಾಥ ಪ್ರಾಣಿಗಳು ಆವಾಸಕ್ಕಾಗಿ, ನೀರಿಗಾಗಿ ಊರೊಳಗೆ, ಕಾಫಿತೋಟದೊಳಗೆ ದಾಳಿಯಿಟ್ಟಿವೆ. ಪ್ರವಾಸೋದ್ಯಮ ಪ್ರಕೃತಿ ರಕ್ಷಣೆ ಎರಡು ಒಟ್ಟೊಟ್ಟಿಗೆ ಆಗಬೇಕು. ಆದರೆ, ವ್ಯವಸ್ಥೆ ಹೇಗಿದೆ ಅಂದ್ರೆ, ರಿವರ್ ರ್ಯಾಫ್ಟಿಂಗ್ ನಂಥ ಅಪಾಯಕಾರಿ ಕ್ರೀಡೆಯನ್ನು ಯಾವ ಮಾರ್ಗದರ್ಶಿ ಸೂತ್ರಗಳಿಲ್ಲದೇ ವರ್ಷಗಳಕಾಲ ನಡೆಸಲಾಯಿತು.



ಪ್ರಾಣಿಗಳ ಬಗೆಗೆ ನಮಗಿರುವ ಜ್ಞಾನದ ಕೊರತೆಯು ಅವುಗಳ ದಾಳಿಗೆ ನಾವು ಸುಲಭವಾಗಿ ಸಿಲುಕಲು ಕಾರಣ. ಅರಣ್ಯದಂಚಿನಲ್ಲಿ ವಾಸಿಸುವವರು ಪ್ರಾಣಿಗಳ ನಡವಳಿಕೆಗಳ ಬಗೆಗೆ ಸ್ವಲ್ಪ ಮಟ್ಟಿನ ಜ್ಞಾನವನ್ನಾದರು ಹೊಂದಿರಬೇಕು. ಇಲ್ಲದಿದ್ದರೆ ನಮ್ಮ ಅರಣ್ಯ ಇಲಾಖೆಗಳು ಜನರಿಗೆ ಆ ಕುರಿತಾದ ತರಬೇತಿ ಕೊಡುವುದು, ಜಾಗೃತಿ ಮೂಡಿಸುವ ಕೆಲಸ ಮಾಡಬೇಕು. ಕಾಡಿನಪಕ್ಕ ವಾಸಿಸುವವರು ಆದಷ್ಟು ಈ ಸಾಕುಪ್ರಾಣಿಗಳಾದ ಹಸು, ನಾಯಿ, ಬೆಕ್ಕು ಇಂಥವನ್ನು ಸಾಕದಿರುವುದೇ ಒಳಿತು ಎನ್ನುತ್ತಾರೆ ತಜ್ಞರು. ಏಕೆಂದರೆ ಸುಲಭವಾಗಿ ಅವುಗಳು ಇವನ್ನು ಬೇಟೆ ದೃಷ್ಟಿಯಿಂದ ಅರಸುತ್ತಾ ಬರಬಹುದು. ಪ್ರಾಣಿಗಳನ್ನು ಕೆಣಕುವುದು, ತೊಂದರೆ ನೀಡುವುದು ಮಾಡಬಾರದು. ಆಗ ಘರ್ಷಣೆಯ ಮಟ್ಟ ಕೊಂಚ ಕುಸಿಯುತ್ತದೆ. ಹೆಚ್ಚಿನದಾಗಿ ಪ್ರಾಣಿಗಳು ಬೆಳಿಗ್ಗೆ ಮತ್ತು ಸಂಜೆಯ ಸಮಯದಲ್ಲಿ ದಾಳಿಯನ್ನು ಹೆಚ್ಚಾಗಿ ಮಾಡುತ್ತವೆಯಂತೆ ಅಂತ ಸಂದರ್ಭದಲ್ಲಿ ನಾವು ಹೊರಗೆ ಒಂಟಿಯಾಗಿ ಹೋಗದಿರುವುದು ಒಳಿತು ಎನ್ನುತ್ತಾರೆ.

ಪರಿಸರ ವ್ಯವಸ್ಥೆಯ ಮೂಲಭೂತ ತತ್ವಕ್ಕೆ ನಾವು ಕೊಡಲಿಪೆಟ್ಟು ಕೊಡುತ್ತಿದ್ದೇವೆ.

ಭೂಮಿಯ ಮೇಲೆ ಬದುಕುವ ಪ್ರತಿಯೊಂದು ಜೀವಿಯು ತನ್ನದೇ ಆದ ರೀತಿ-ನೀತಿಗಳನ್ನು ಹೊಂದಿರುತ್ತದೆ. ಅವುಗಳ ದೇಹದ ಗಾತ್ರ, ವರ್ಣ ವಿನ್ಯಾಸ, ಆಹಾರದ ಕ್ರಮ, ನಡವಳಿಕೆ, ಪರಿಸರ, ಮೊದಲಾದ ಅಂಶಗಳು ವಿಭಿನ್ನವಾಗಿರುತ್ತವೆ. ಯಾವುದೇ ಜೀವಿಯು ಒಂಟಿಯಾಗಿ ಜೀವನ ಮಾಡಲಾರದು. ಪ್ರತಿಯೊಂದು ಜೀವಿಸಂಕುಲಗಳು ಆಹಾರಕ್ಕಾಗಿ, ಆವಾಸಕ್ಕಾಗಿ ಪರಸ್ಪರ ಹೋರಾಟ ನಡೆಸುತ್ತಲೇ ಇರುತ್ತವೆ. ಹೀಗೆ ಜೀವಿ-ಜೀವಗಳೊಂದಿಗಿನ ಸಂಬಂಧ, ಸಹಕಾರ, ಪೈಪೋಟಿ, ಜೀವಿ-ನಿರ್ಜೀವಿಗಳೊಂದಿಗಿನ ಹೊಂದಾಣಿಕೆ, ಒಡನಾಟ, ಪ್ರಭಾವಗಳಿರುವ ಒಂದು ಅತೀ ಸಂಕೀರ್ಣವಾದ ವ್ಯವಸ್ಥೆಯೇ ಪರಿಸರ ವ್ಯವಸ್ಥೆಯಾಗಿರುತ್ತದೆ.

ಪರಿಸರದಲ್ಲಿ ಒಂದು ಜೀವಿಯ ಸಂಪೂರ್ಣ ಅಳಿವಾದರೂ ಪರಿಸರ ಸಮತೋಲನ ತಪ್ಪಿ ಹೋಗುತ್ತದೆ. ಪ್ರತಿಯೊಂದು ಜೀವಿಯ ಆಹಾರಕ್ರಮ ತಪ್ಪಿಹೋದರೆ ಪರಿಸರಕ್ಕೆ ಅದು ಭಾರೀ ಹೊರೆಯಾಗುತ್ತದೆ. ಉದಾಹರಣೆಗೆ ಜಿಂಕೆಗಳು ಹುಲ್ಲುಗಾವಲಿನ ಹುಲ್ಲುತಿಂದರೆ ಅದನ್ನು ಮಾಂಸಾಹಾರಿ ಪ್ರಾಣಿಗಳಾದ ಹುಲಿ, ಚಿರತೆಗಳು ತಿನ್ನುತ್ತವೆ. ಅವುಗಳಲ್ಲಿ ಬಲಾಢ್ಯ ಹುಲಿಗಳು ಬದುಕುಳಿಯುತ್ತವೆ. ಇನ್ನು ಉನ್ನತಶ್ರೇಣಿಯ ಜೀವಿಗಳು ಸತ್ತಾಗ ಅವುಗಳ ದೇಹವನ್ನು ಹೊಕ್ಕುವ ಶಿಲೀಂಧ್ರಗಳು, ಬ್ಯಾಕ್ಟೀರಿಯಾಗಳು ಆ ಮೃತದೇಹವನ್ನು ಕೊಳೆಯುವಂತೆ ಮಾಡಿ ಮಣ್ಣಿಗೆ ಗೊಬ್ಬರವಾಗಿ ಸೇರಿಸುತ್ತವೆ. ಹೀಗೆ ಈ ಚಕ್ರ ತಿರುಗುತ್ತಾ ಇರಬೇಕು. ಆದರೆ ಪ್ರಕೃತಿ ಚಿತ್ರಣ ಇಂದು ಏನಾಗಿದೆ. ಅರಣ್ಯದ ವ್ಯಾಪ್ತಿ ಕಡಿಮೆಯಾಗಿದೆ.

ಕಾಡ್ಗಿಚ್ಚು, ಬೇಟೆ, ಅಭಿವೃದ್ಧಿ ಕಾಮಗಾರಿಗಳು, ನೀರಾವರಿ ಯೋಜನೆಗಾಗಿ ಕಾಡುನಾಶ, ನಮ್ಮಲ್ಲೂ ರೈಲ್ವೆ ಯೋಜನೆಗಾಗಿ ಸಾವಿರಾರು ಎಕರೆ ಕಾಡು ನಾಶ ಮಾಡಹೊರಟಿದ್ದರಲ್ಲ... ಸಂರಕ್ಷಿಸಲ್ಪಟ್ಟ ಅರಣ್ಯಗಳ ಒತ್ತುವರಿ, ಸರ್ಕಾರ ತನಗೆ ಬೇಕೆಂದಾಗ ಮಾಡುವ ಅಕ್ರಮ-ಸಕ್ರಮ ಭೂ ಬದಲಾವಣೆಗಳು, ಕಾಡಿನ ಜಟಿಲತೆಯನ್ನು ಹಾಳುಗೆಡವುತ್ತಿವೆ. ನಮ್ಮ ರಾಜ್ಯದ ಚಿರತೆಗಳ ಸಂಖ್ಯೆ ಬರೇ ಅರವತ್ತೆರಡು! ಇದು ಎರಡು ದಶಕದ ಹಿಂದಿನ ಅಂಕಿ-ಅಂಶ ಅಂದರೆ, ಈಗ ಎಷ್ಟಾಗಿರಬಹುದು ಊಹೆ ಮಾಡಿಕೊಳ್ಳಿ.



ಅರಣ್ಯಗಳು ಕ್ಷೀಣಿಸುತ್ತಾ ವನ್ಯಜೀವಿಗಳು ಪರಿಸರ ವ್ಯವಸ್ಥೆಗೆ ವಿದಾಯ ಹೇಳುವ ಹಂತಕ್ಕೆ ತಲುಪುತ್ತಿವೆ. ಕಳೆದ ವರ್ಷ ದುಬಾರೆಯಿಂದ ಸಿದ್ದ ಎಂಬ ಆನೆಮರಿಯನ್ನು ಸ್ಥಳಾಂತರ ಮಾಡುವ ಉದ್ದೇಶದಿಂದ ಅರಣ್ಯ ಇಲಾಖೆ ಜಾರ್ಖಂಡ್ ಗೆ ಆನೆಯನ್ನು ಲಾರಿ ಹತ್ತಿಸಹೋದಾಗ ಸಿದ್ದ ಹಠಮಾಡಿ ಕಣ್ಣೀರು ಸುರಿಸಿ, ಕಾಡಿನಲ್ಲಿ ಮಾಯವಾಗಿದ್ದ ಅವನನ್ನು ಮಾರನೇದಿನ ಬಲವಂತವಾಗಿ ಲಾರಿಹತ್ತಿಸಿ ಕಳುಹಿಸಿದ್ದು ವನ್ಯಜೀವಿ ಜಗತ್ತು ನಮ್ಮಿಂದ ಮರೆಯಾಗುತ್ತಿರುವ ದುರಂತತೆಯ ಸೂಚಕ ಅಂದರು ಅನ್ನಬಹುದು. ಒಂದು ಕಾಡುಪ್ರಾಣಿಯನ್ನು ಅದರಿಚ್ಛೆಯಂತೆ ಅದು ಹುಟ್ಟಿಬೆಳೆದ ಕಾಡಿನಲ್ಲಿ ಇರಲು ಬಿಡದೆ ಕಳುಹಿಸಿದ್ದು ಎಂಥ ಮನಕಲಕುವ ಸನ್ನಿವೇಶ...

ಪ್ರಾಣಿದಯಾ ಸಂಘಗಳು ಬರೇ ಟೀಶರ್ಟ್ ಮೇಲೆ ಹುಲಿ, ಸಿಂಹ ರಕ್ಷಣೆ ಮಾಡುತ್ತಿವೆಯಾ?

ಹೌದು ನೀವು ಗಮನಿಸಿ, ಅವರ ಹೆಚ್ಚಿನ ಚಟುವಟಿಕೆಗಳು ಇಂಥಕಡೆ ನಡೆಯಬೇಕು. ಆದರೆ ಅವರದ್ದೇನಿದ್ದರು ಸಿನಿಮಾದಲ್ಲಿ ನಿಜವಾದ ಆನೆಬಳಸಿ ಶೂಟಿಂಗ್ ಮಾಡಿದ್ರಾ? ಇಲ್ಲ ಗ್ರಾಫಿಕ್ ಆನೆಬಳಸಿದ್ರಾ ಅನ್ನುವಂತಹ ಮೊಕದ್ದಮೆಗಳನ್ನು ಹೂಡಿ ಪ್ರಚಾರ ಪಡೆಯುತ್ತಿರುತ್ತವೆ. ಆದರೆ ನಿಜವಾಗಿ ಜೀವಂತ ಆನೆಗಳು ಹೇಗೆ ಶೂಟ್ ಆಗುತ್ತಿವೆ ಎಂದು ತಿರುಗಿಯೂ ನೋಡುವುದಿಲ್ಲ. ಕೊಡಗಿನಲ್ಲಿ ಅದೆಷ್ಟು ಮನುಷ್ಯರು, ಆನೆಗಳು ದುರಂತಕ್ಕೆ ಬಲಿಯಾಗುತ್ತಿವೆ? ಅವುಗಳ ಸಾವು ಹೇಗಾಗುತ್ತಿದೆ ಬಂದು ನೋಡುವವರು ಯಾರೂ ಇಲ್ಲ. ಅದೇ ನೀವೊಮ್ಮೆ ಮಹಾನಗರಕ್ಕೆ ಹೋಗಿ ನೋಡಿದರೆ, ಪ್ರತಿಷ್ಠಿತ ಹೋಟೆಲ್ ರೂಮಲ್ಲಿ ಕುಳಿತು ಇಂಟರ್ನೆಟ್ ನಿಂದ ಪ್ರಾಣಿ ಪಕ್ಷಿಗಳ ಫೋಟೊ ಹೆಕ್ಕಿತೆಗೆದು ಅದನ್ನು ಹಿನ್ನೆಲೆ ಸಂಗೀತದ ಜೊತೆ ಎಡಿಟ್ ಮಾಡಿ, ನಾವು ಪ್ರಾಣಿರಕ್ಷಕರು ಅಂಥ ಹೇಳಿಕೊಂಡು ತಿರುಗುತ್ತಿರುತ್ತಾರೆ.

ಆದರೆ ಅವರಾದರು ಒಮ್ಮೆ ಇತ್ತ ನೋಡಿದರೆ ಸ್ವಲ್ಪಮಟ್ಟಿಗಾದರು ವನ್ಯಜೀವಿಗಳ ಸಮಸ್ಯೆಯನ್ನು ಸರಿಪಡಿಸುವತ್ತ ಗಮನ ಹರಿಸಬಹುದೇನೋ. ಮನೆಯ ಗೋಡೆಯ ಚಿತ್ರಗಳಲ್ಲಿರುವ ಆನೆ, ಚಿರತೆ, ಗುಬ್ಬಿಯ ಫೋಟೋ ಫ್ರೇಮ್ ಗಳಷ್ಟು ಸಂಖ್ಯೆಯ ಕಾಡುಪ್ರಾಣಿಗಳು ನಮ್ಮಲ್ಲಿವೆಯಾ? ದಟ್ಟಕಾಡಿನಲ್ಲಿದ್ದ ಘೀಳಿಡುವ ಮದಗಜ,

ಚಂಗನೆ ಜಿಗಿದು ಓಡುವ ಜಿಂಕೆ, ಹೊಂಚುಹಾಕಿ ಸಂಚುಮಾಡುತ್ತಿದ್ದ ಚಿರತೆ, ಕುತಂತ್ರಿ ನರಿ.... ಇವೆಲ್ಲಾ ರೂಪಕವಾಗಿ ಮಾತ್ರ ಉಳಿದು ಹೋದವಾ? ಸ್ವಾಭಾವಿಕ ನ್ಯಾಯದಂತೆ ನಾವು ಬದುಕಿ ಇತರರಿಗೂ ಬದುಕಲು ಬಿಡಿ ಎನ್ನುವ ನ್ಯಾಯವನ್ನು ನಾವು ಸಂಪೂರ್ಣವಾಗಿ ಮರೆತಿದ್ದೇವೆಯೇ? ಅನಿಸುತ್ತಿದೆ.

ನಮ್ಮಿಂದ ನಮ್ಮ ಜೀವವೈವಿಧ್ಯದ ಕೊಂಡಿಗಳು ಕಳಚಿ ಬೀಳುತ್ತಿವೆ. ಪ್ರತಿಬಾರಿ ಆನೆಗಳು, ಕಾಡುಪ್ರಾಣಿಗಳು ಸತ್ತಾಗ ನಮ್ಮೆಲ್ಲರ ಮನಸ್ಸು ಭಾರವಾಗುತ್ತದೆ. ಹಾಗೇ ಆನೆ ಭೀಕರವಾಗಿ ಮನುಷ್ಯರ ಮೇಲೆ ದಾಳಿ ಮಾಡಿದಾಗಲೂ ಮನುಷ್ಯರು ಮಾಡುತ್ತಿರುವ ತಪ್ಪೇನು ಎಂದು ಮನಸು ಚಿಕ್ಕದಾಗುತ್ತದೆ. ಇಷ್ಟವಿಲ್ಲದ ಮನಸ್ಸಿನಿಂದ ಬೇರೆ ರಾಜ್ಯಕ್ಕೆ ಹೋದ ಸಿದ್ಧ ಆನೆ ಕೊಡಗಿನ ಕಾಡಿಗೆ ಎಂದು ಹೋಗುವೆ, ತನ್ನವರನ್ನೆಲ್ಲ ಎಂದು ನೋಡುವೆ ಎಂದು ಕಾಯುತ್ತಿರುವ ಚಿತ್ರ ಕಣ್ಮುಂದೆ ಬಂದಂತಾಗುತ್ತದೆ.

ಪೂರ್ಣಚಂದ್ರ ತೇಜಸ್ವಿಯವರಿಗೆ ಅನಿಸಿದಂತೆ, ಇದರ ಬಗೆಗೆ ಇನ್ನೂ ಬರೆಯಬೇಕು. ಕಾನೂನು ಶಿಕ್ಷಿಸುತ್ತದೆ ಎಂದೆಲ್ಲಾ ಹೇಳಿಯೂ ಪ್ರಯೋಜನವಿಲ್ಲ ಅನಿಸುವಂತೆ ನಮ್ಮ ಪರಿಸ್ಥಿತಿ ಆಗಿದೆ. ನಮಗೆಲ್ಲಾ ತಾಸುಗಟ್ಟಲೆ ಟಿವಿ ಮುಂದೆ ಕುಳಿತು ನ್ಯಾಷನಲ್ ಜಿಯೋಗ್ರಫಿಯ ಕಾರ್ಯಕ್ರಮ ನಮ್ಮ ಮಕ್ಕಳು ನೋಡುತ್ತಾರೆ ಎಂದು ಹೇಳುವುದರಲ್ಲಿ ಹೆಮ್ಮೆಯಿದೆ. ಆದರೆ ಪಕ್ಕದ ಕಾಡಿನಲ್ಲಿ ಅಳಿಸಿ ಹೋಗುತ್ತಿರುವ ಪ್ರಾಣಿಸಂಕುಲಕ್ಕೆ ಅಲ್ಲಿಂದ ಎದ್ದುಬಂದು ಏನು ಮಾಡಬಹುದು ಎಂದು ಯಾರೂ ಯೋಚಿಸುವುದಿಲ್ಲ. ಯಾರನ್ನೇ ದೂರಿದರು ಅಂತಿಮವಾಗಿ ಹಾಳಾಗುತ್ತಿರುವುದು ಕಾಡು ಮತ್ತು ಕಾಡುಪ್ರಾಣಿಗಳೇ, ಇದಷ್ಟೇ ಸತ್ಯ.



*



© ಶಶಿಧರಸ್ವಾಮಿ ಆರ್. ಹಿರೇಮಠ

# ಕನಕದಾಸರು ಕಂಡ ಚಕ್ರವಾಕ ಹಕ್ಕಿ

* ಶಶಿಧರಸ್ವಾಮಿ ಆರ್. ಹಿರೇಮಠ

ಕನಕದಾಸರ ಆರಾಧ್ಯ ದೈವ ಆದಿಕೇಶವನ ನೆಲೆಯಾದ ಕಾಗಿನೆಲೆಯ ದೊಡ್ಡಕೆರೆಯಲ್ಲಿ (ಈಗ ಈ ಕೆರೆಯ ಹೆಸರು ಕನಕ ಸರೋವರ) ಜೋಡಿಯಾದ ಕೆಂಬಾತು ಹಕ್ಕಿಗಳು ಉಚ್ಛಸ್ಥಾಯಿಯ ಸ್ವರ ಆಲಾಪನೆಯಲ್ಲಿ ತೊಡಗಿ ಸಂಗೀತ ಕಛೇರಿ ಏರ್ಪಡಿಸಿ ಸ್ಪರ್ಧೆಗಿಳಿದು ಜುಗಲ್ ಬಂದಿ ಹಾಡುಗಾರಿಕೆ ಕರ್ಣಗಳಿಂದ ಮನಕೆ ತಾಗಿದಾಗ, ಜಗವೇ ಮರೆತು ಕೆರೆಪರಿಸರದಲ್ಲಿ ಮೈಮರೆತು ಹೋದೆ. ಹೌದು ಇದರ ಗಾನಸುಧೆಯೇ ಹಾಗೆ, ಅಷ್ಟೇ ಅಲ್ಲ ನೋಡಲು ಬಲು ಅಂದವಾದ ಹಕ್ಕಿ. ಇದರ ಸೌಂದರ್ಯ ಎಂಥವರನ್ನೂ ಆಕರ್ಷಿಸದೇ ಇರದು. ಈ ಹಕ್ಕಿಗೆ ಮನಸೋತು ಕನಕದಾಸರು ತಮ್ಮ 'ಮೋಹನ ತರಂಗಿಣಿ' ಮಹಾಕಾವ್ಯದ ಹನ್ನೆರೆಡು ಸಾಂಗತ್ಯಗಳಲ್ಲಿ ಈ ಹಕ್ಕಿಯನ್ನು ಉಲ್ಲೇಖಿಸಿ ಇವನ್ನು ಚಕ್ರವಾಕ, ಚಕ್ರ, ಪಗಲ್ವಕ್ಕಿ, ಚಕ್ರಿ, ಎಣೆವಕ್ಕಿ, ರಥಾಂಗಪಕ್ಷಿ, ಕೋಕ, ಜಕ್ಕವಕ್ಕಿ ಎಂದೆಲ್ಲಾ ಹೆಸರಿಸಿದ್ದಾರೆ. (ಉದಾಹರಣೆಯಾಗಿ ಎರಡು ಸಾಂಗತ್ಯ ಹೀಗಿವೆ)

ಜೋಡಿಗೊಂಡವು ಚಕ್ರವಾಕ ಪಕ್ಷಿಗಳು
ಓಡಿದುವಳಿಚೂತವನಕೆ
ಮಾಡಿದ ಚಂದ್ರಪಲಾಯನ ಪಠನಸೂರ್ಯ
ಮೂಡಿದನುದಯ ಶೈಲದಲಿ ೧೭-೫

ವಾರಿಜಚಕ್ರಿವಕ್ಕಿಗಳು ಕುಗ್ಗಿದುವು
ಚಕೋರನೀಲಾಬ್ಜ ಹಿಗ್ಗಿದುವು
ಸೋರಿದುವಮೃತಪಾಷಾಣ ಪಾಲ್ಗಡಲಂತೆ
ಪೂರಯಿಸಿತು ಚಂದ್ರನುದಯ ೧೭-೧೨



© ಹಯಾತ್ ಮೊಹಮ್ಮದ್

ಹಕ್ಕಿಯ ವಿವರಣೆ:




ಚಕ್ರವಾಕ ಹಕ್ಕಿಗಳನ್ನು ಕೆಂಬಾತು, ಕಂದುಬಾತು, ಕವಚಬಾತು, ಕೆಂಪುಹಂಸ ಎಂತೆಲ್ಲಾ ಕರೆಯುತ್ತಾರೆ. ಆಂಗ್ಲಭಾಷೆಯಲ್ಲಿ ಬ್ರಾಹ್ಮಿಣಿ ಡಕ್ (Brahminy Duck) ಅಥವಾ ರೂಡಿಶೆಲ್ಡಕ್ (Ruddy Shelduck) ಎಂದು ಕರೆಯುತ್ತಾರೆ. ಪಕ್ಷಿಶಾಸ್ತ್ರೀಯಾಗಿ ಟಡೋರ್ನಾ ಫೆರುಗಿನಿಯಾ (Tadorna ferruginea) ಎಂದು ಹೆಸರಿಸಿ, ಅನ್ಸಾರಿಫಾರ್ಮಿಸ್ (Anseriformes) ಗಣದ ಅನಾಟಿಡೇ (Anatidae) ಕುಟುಂಬಕ್ಕೆ ಸೇರಿಸಲಾಗಿದೆ. ಟಡೋರ್ನಾ ಫೆರುಗಿನಿಯಾ (Tadorna ferruginea) ಎಂಬ ಈ ದ್ವಿನಾಮವನ್ನು (Binomial Name) 1764ರಲ್ಲಿ ಪೀಟರ್ಸೈಮನ್ಪಲ್ಲಾಸ್ ಎಂಬ ಸಸ್ಯ ಮತ್ತು ಪ್ರಾಣಿಶಾಸ್ತ್ರಜ್ಞರು ಪರಿಚಯಿಸಿದರು. ಟಡೋರ್ನಾ ಕುಲದ ಹೆಸರು ಫ್ರೆಂಚ್ "ಟಡಾರ್ನ್", ಸಾಮಾನ್ಯ ಶೆಲ್ ಡಕ್ ನಿಂದ ಬಂದಿದೆ ಮತ್ತು ಮೂಲತಃ "ಪೈಡ್ವಾಟರ್ಫೌಲ್" ಎಂಬ ಅರ್ಥವಿರುವ ಸೆಲ್ಟಿಕ್ ಪದದಿಂದ ಹುಟ್ಟಿಕೊಂಡಿರಬಹುದು. "ಶೆಲ್ ಡಕ್" ಎಂಬ ಇಂಗ್ಲೀಷ್ ಹೆಸರು ಸುಮಾರು 1700 ರಿಂದ ಪ್ರಾರಂಭವಾಗಿದೆ. ಫೆರುಗಿನಿಯಾ ಎಂಬ ಜಾತಿಯ ಹೆಸರು ಲ್ಯಾಟಿನ್ ಭಾಷೆಯಲ್ಲಿ "ತುಕ್ಕು" ಬಣ್ಣದ ಪುಕ್ಕಗಳನ್ನು ಸೂಚಿಸುತ್ತದೆ.

ಇವು 65ಸೆಂ.ಮೀ ಗಾತ್ರದ ಕಿತ್ತಳೆ, ಕಂದು ಬಣ್ಣದ ಪಕ್ಷಿಗಳಾಗಿದ್ದು, ತಲೆ ಹಾಗೂ ಕತ್ತು ತುಸು ಮಾಸಲು ಬಿಳಿ ಬಣ್ಣದಿಂದ ಕೂಡಿರುತ್ತವೆ ಹಾಗೂ ರೆಕ್ಕೆಗಳು ಬಿಳಿಮಿಶ್ರಿತ ಕಪ್ಪು ಮತ್ತು ಹೊಳೆಪಿನ ಹಸಿರುವರ್ಣಗಳಿಂದ ಕೂಡಿವೆ, ಹಾಗೆಯೇ ಕಪ್ಪಾದ ಮೊಂಡು ಬಾಲವಿದೆ, ಕುತ್ತಿಗೆಯಲ್ಲಿ ಕಪ್ಪುಪಟ್ಟಿಯಿದೆ. ದೇಹವು ಎಣ್ಣೆಯುಕ್ತ ಪುಕ್ಕಗಳಿಂದ ಕೂಡಿರುವ ಕಾರಣ ಇವು ಸದಾನೀರಿನಲ್ಲಿ ಇದ್ದರೂ ಪುಕ್ಕಗಳು ನೆನೆಯುವುದಿಲ್ಲ, ಬದಲಿಗೆ ಜಲಹನಿಗಳು ಜಾರುತ್ತವೆ. ಕಾಲುಗಳು ಜಾಲಪಾದಗಳನ್ನು ಹೊಂದಿವೆ. ದೇಹವು ದೋಣಿ ಆಕಾರದಲ್ಲಿದ್ದು ನೀರಿನಮೇಲೆ ಸರಾಗವಾಗಿ ಈಜಿ ತೇಲಾಡುವಂತೆ ಮಾಡಿದೆ.

ಕೆರೆ, ನದಿ ಗಳಲ್ಲಿ ಜೋಡಿಯಾಗಿಯೂ ಕೆಲಸಮಯ ಗುಂಪಿನಲ್ಲಿಯೂ ಕಾಣಸಿಗುತ್ತವೆ. ನೀರಿಗಿಂತ ಹೆಚ್ಚಾಗಿ ಕೆಸರು ಮಣ್ಣಿರುವ(ರಾಡಿ) ಜಾಗಗಳಲ್ಲಿ, ಮರಳುದಿಬ್ಬಗಳಲ್ಲಿ ಜಲಕೀಟ, ಮೃದ್ವಂಗಿ, ಏಡಿ, ಮೀನು, ಸಣ್ಣ ಜಲಸಸ್ಯಗಳನ್ನು ಆಹಾರವಾಗಿ ತಿನ್ನುತ್ತವೆ. ಚಳಿಗಾಲದ ವಲಸೆಗಾರ ಹಕ್ಕಿಗಳಾಗಿ ಕರ್ನಾಟಕಕ್ಕೆ ಟಿಬೇಟ್, ನೇಪಾಳ, ಲಡಾಕ್ ನಿಂದ ವಲಸೆ ಬರುತ್ತವೆ.

ಮೂಗಿನಿಂದ ಹೊರಟಂತೆ ವಾಂಗ್... ವಾಂಗ್... ಎಂದು ಕೂಗುತ್ತವೆ. ಕರ್ನಾಟಕ ಶಾಸ್ತ್ರೀಯ ಸಂಗೀತ ಪದ್ಧತಿಯಲ್ಲಿ 'ಚಕ್ರವಾಕ' ಎಂಬ ರಾಗವಿದೆ. ಈ ರಾಗವು ಮೇಳಕರ್ತ ರಾಗಗಳಲ್ಲಿ ಹದಿನಾರನೇಯದು. ಮುತ್ತುಸ್ವಾಮಿ ದೀಕ್ಷಿತರು ಇದನ್ನು ತೋಜವೇಗವಾಹಿನಿ ಎಂದು ಹೆಸರಿಸಿದ್ದಾರೆ. ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತ ಪದ್ಧತಿಯಲ್ಲಿ ಅಹಿರ್ ಬೈರವ ರಾಗಕ್ಕೆ ಹತ್ತಿರವಾಗಿದೆ. ಈ ರಾಗವನ್ನು ಕೇಳಿದಾಗ ಕೇಳುಗರಲ್ಲಿ ಭಕ್ತಿರಸ ಮತ್ತು ಸಹಾನುಭೂತಿ ಉಕ್ಕಿಬಂದು ಭಕ್ತಿ ಪರಾಕಾಷ್ಠೆಯಲ್ಲಿ ಮುಳುಗುತ್ತಾರೆ. ಚಕ್ರವಾಕ ರಾಗದಲ್ಲಿ ಎಲ್ಲ ಶುದ್ಧಸ್ವರಗಳಿವೆ ಆರೋಹಣದಲ್ಲಿ ಸ.ರಿ.ಗ.ಮ.ಪ.ದ.ನಿ.ಸ ಅವರೋಹಣದಲ್ಲಿ ಸ.ನಿ.ದ.ಪ.ಮ.ಗ.ರಿ.ಸ ಇದ್ದು ಇದೊಂದು ಸಂಪೂರ್ಣ ರಾಗವಾಗಿದೆ.

ಕಂದುಬಾತುಹಕ್ಕಿಯ ವಾಂಗ್... ವಾಂಗ್... ಕೂಗು ನರಿ (ರಿಷಭ- ಗೂಳಿಯ ಧ್ವನಿ ಹೋಲುವ) ಈ ಹಕ್ಕಿಯ ಕೂಗಿನಲ್ಲಿ ಉಚ್ಛಸ್ಥಾಯಿಯಲ್ಲಿ ಕೇಳಿಸುವುದರಿಂದ ಈ ಹಕ್ಕಿಗೆ ಚಕ್ರವಾಕ ಎಂಬ ಹೆಸರು ಬಂದಿರಬಹುದು. ಚಕ್ರವಾಕ ರಾಗದಿಂದ ಕೆಲವು ಜನ್ಯ ರಾಗಗಳಿವೆ. ಅವುಗಳೆಂದರೆ ಬಿಂದುಮಾಲಿನಿ, ಕಲಾವತಿ, ಮಲಯಮಾರುತ, ವಾಲಜಿರಾಗಗಳು ಹೆಚ್ಚು ಪ್ರಚಲಿತದಲ್ಲಿದ್ದು ಮಲಯಮಾರುತ ರಾಗದಿಂದ ಮಳೆಯನ್ನೇ ಸುರಿಯುವಂತೆ ಮಾಡುವ ಶಕ್ತಿ ಇದೆ.


© ಶಶಿಧರಸ್ವಾಮಿ ಆರ್. ಹಿರೇಮಠ

*



ವಿ. ವಿ. ಅಂಕಣ

# ಹೊಳೆಯುವ ಕಪ್ಪೆಗಳು!

• ಜೈಕುಮಾರ್ ಆರ್.

ನಾವು ಕೆಲವು ವರ್ಷಗಳಿಂದ 'ಚಿಣ್ಣರ ವನ ದರ್ಶನ' ಎಂಬ ಕಾರ್ಯಕ್ರಮ ಮಾಡುತ್ತಿದ್ದು, ಪ್ರೌಢಶಾಲೆಯ ಮಕ್ಕಳನ್ನು ಪ್ರಕೃತಿಯ ಮಡಿಲ ಹತ್ತಿರಕ್ಕೆ ಕರೆತಂದು ಅದರ ಸೊಬಗನ್ನು ಸವಿದು ಗೌರವಿಸುವ ಮನೋಭಾವ ಮೂಡಿಸುವ ಉದ್ದೇಶ ಇರುತ್ತದೆ. ಕರ್ನಾಟಕ ಅರಣ್ಯ ಇಲಾಖೆ ಪ್ರಾಯೋಜಿತ ಎರಡು ದಿನದ ಪ್ರಕೃತಿ ಶಿಬಿರ ಇದಾಗಿದೆ. ಈ ಕಾರ್ಯಕ್ರಮದಲ್ಲಿ ಒಂದು ಭಾಗವಾಗಿ ಮಕ್ಕಳನ್ನು ಪ್ರಾಣಿಗಳ ಬಳಿ ಸಫಾರಿಗೆ ಕರೆದೊಯ್ಯುತ್ತೇವೆ. ಅದೇನೋ.. ಮೊದಲ ದಿನದಿಂದಲೂ ಎಂದೂ ನೋಡಿರದ ಸಿಂಹ, ಬಿಳಿಹುಲಿ, ಕರಡಿ ಇವುಗಳನ್ನೆಲ್ಲಾ ನೋಡಿದರೂ ಅಷ್ಟು ಅಚ್ಚರಿ ಆದಹಾಗೆ ತೋರಲಿಲ್ಲ. ನನ್ನದೇ ಆಲೋಚನೆಗಳ ಜೊತೆ ಸ್ವಲ್ಪ ಮಾತುಕತೆ ನಡೆಸಿದ ನಂತರ ತಿಳಿಯಿತು, ಇವು ಎಲ್ಲಿಂದಲೋ ತಂದು ಇಲ್ಲಿ ನಾವು ನೋಡಲೆಂದು ಕೂಡಿಹಾಕಿರುವ ಮಾನವ ನಿರ್ಮಿತ ಆದರೆ ಸ್ವಾಭಾವಿಕವಾಗಿ ಕಾಣುವಂತೆ ಮಾಡಲು ಯತ್ನಿಸಿದ ಪ್ರಾಮಾಣಿಕವಲ್ಲದ ಒಂದುಪ್ರಯತ್ನ ಎಂದು. ಬೇರೆಯವರ ವಿಷಯ ನನಗೆ ಗೊತ್ತಿಲ್ಲ, ಕಾಡಿನ ಅಂಚಿನಲ್ಲೇ ಹುಟ್ಟಿಬೆಳೆದ ನನಗಂತೂ ನಮ್ಮ ಕಾಡಿನಲ್ಲಿ ಆಗಲೋ ಈಗಲೋ ನೋಡುವ ಒಂದು ಸಣ್ಣ ಮೊಲ ಅಥವಾ ಮುಂಗುಸಿ ಸೆಳೆಯುವ ಹಾಗೆ, ಈ ಕೂಡಿಹಾಕಿ ಬೆಳೆಸುತ್ತಿರುವ ಪ್ರಾಣಿಗಳು ವಿಶೇಷವಾದರೂ ನನ್ನನ್ನು ಸೆಳೆಯುವಲ್ಲಿ ವಿಫಲವಾಗಿವೆ ಎಂದರೆ ಅತಿಶಯವಲ್ಲ.

ಅದು ಹೇಗೆ ಸಾಧ್ಯ, ನಮ್ಮ ಕಾಡಿನಲ್ಲೆಲ್ಲೂ ಸಿಗದ ಅಪರೂಪದ ಪ್ರಾಣಿಗಳಾದ ಸಿಂಹಗಳೂ ಹೊಸದೆನಿಸಿಲ್ಲವೇ? ಎಂಬ ಪ್ರಶ್ನೆ ಕೆಲವರಲ್ಲಿ ಮೂಡಬಹುದು. ಅದಕ್ಕೊಂದು ನಿದರ್ಶನವಿದು, ಎಂದು ಹೇಳಲಾರೆ. ಆದರೆ ನನ್ನ ಈ ಸಣ್ಣ ಅನುಭವ ಕಾಡಿನಲ್ಲಿ ಸ್ವಾಭಾವಿಕವಾಗಿ ಪ್ರಾಣಿಗಳ ನೋಡಲು ಬಯಸುವ ಉತ್ಸುಕತೆಯನ್ನು ನಿಮಗೆ ಅರ್ಥವಾಗಿಸುವಲ್ಲಿ ಪ್ರಯೋಜನಕಾರಿಯಾಗಬಹುದು ಎಂದು ನಂಬಿದ್ದೇನೆ.

ಹೀಗೊಂದು ದಿನ ಪಟ್ಟಣದಿಂದ ನಮ್ಮ ಊರಿಗೆ ಮರಳುವ ಸಮಯ. ರಾತ್ರಿಯಾಗಿತ್ತು! ಎಂದೇ ಆಗಲಿ ರಾತ್ರಿಯ ಸಮಯದಲ್ಲಿ ನಮ್ಮ ಊರಿಗೆ ಮರಳುವುದಾದರೆ ನಮಗಂತೂ ಎಲ್ಲಿಲ್ಲದ ಸಂತಸ. ಯಾವುದಾದರು ಕಾಡುಪ್ರಾಣಿಯ ದರ್ಶನವಾಗಬಹುದು ಎಂದು. ಆ ದಿನವೂ ಸಹ ಅದೇ ಆಶಯದಿಂದ ಕಾಡಿನ ದಾರಿಯಲ್ಲಿ ಸ್ವಲ್ಪ ನಿಧಾನವಾಗಿ ಚಲಿಸುತ್ತಾ ಅತ್ತ ಇತ್ತ ಕಣ್ಣಾಡಿಸುತ್ತಾ ಬರುತ್ತಿದ್ದೆವು. ಆ ದಿನ ನಮ್ಮ ರಾಶಿಗಳಿಗೆ ಕೂಡಿಬಂದಿರಲಿಲ್ಲವೆಂದು ತೋರುತ್ತದೆ ಯಾವ ಪ್ರಾಣಿಯ ದರ್ಶನಭಾಗ್ಯವೂ ಸಿಗಲಿಲ್ಲ. ಇನ್ನೇನು ಕಾಡು ಮುಗಿಯುತ್ತಾ ಬಂತು, ಕಾಡಿನ ಗಡಿಯ ಗೇಟನ್ನು ದಾಟಿ ಬಿಟ್ಟರೆ ಇನ್ನು ಪ್ರಾಣಿಗಳು ಸಿಗುವುದಿಲ್ಲ ಎಂದುಕೊಂಡು ತುಸು ನಿರಾಶೆಯಿಂದ ಸ್ವಲ್ಪಗಾಡಿಯ ವೇಗ ಹೆಚ್ಚಿಸಿದ್ದೆವು. ಇನ್ನೇನು ಎಲ್ಲಾ ಮುಗಿಯಿತು ಮನೆಗೆ ಹೋಗಿ

ಮಲಗುವುದೇ... ಅಮ್ಮ ಊಟಕ್ಕೆ ಕರೆದರೆ ಹೋಗುವುದು ಬೇಡ. ಹೀಗೆ ಬೇರೆ ಆಲೋಚನೆಗಳಕಡೆ ಹೊರಟೆ. ಹಾಗೆ ಯೋಚಿಸುತ್ತಾ ಗಾಡಿಯನ್ನು ತಿರುವಿನಲ್ಲಿ ತಿರುಗಿಸಿ ಮುಂದಿನ ನೇರರಸ್ತೆಯಲ್ಲಿ ಬರುವಾಗ ಎರಡು ವಸ್ತುಗಳು ದೂರದಲ್ಲಿ ಹೊಳೆದಂತಾದವು. ಅಯ್ಯೊ ಇದು ಯಾವುದೋ ಮಿಂಚುಹುಳವಿರಬೇಕು, ಹತ್ತಿರದಲ್ಲೇ ಇವೆ ಎಂದುಕೊಂಡೆ. ಸ್ವಲ್ಪ ಮುಂದೆಬಂದೆ. ಆಗಲೂ ಸಹ ಆ ಹೊಳೆಯುವ ವಸ್ತುಗಳು ಅಲ್ಲೇ ಅದೇ ದೂರದಲ್ಲಿವೆ. ಇಷ್ಟಾದರೂ ಸಹ, ಓಹೋ ಯಾವುದೋ ಪ್ಲಾಸ್ಟಿಕ್ ಮರಕ್ಕೆ ಅಂಟಿರಬೇಕು, ಅದೇ ಹೊಳೆಯುತ್ತಿರಬೇಕು ಎಂದುಕೊಂಡೆ. ಇನ್ನು ಸ್ವಲ್ಪ ಮುಂದೆಬಂದು ನೋಡಿದರೆ ಇನ್ನೂ ಅವೆರೆಡು ಹೊಳೆಯುವ ಬಿಂದುಗಳು ಹಾಗೆ ಅಲ್ಲಿಯೇ ಇವೆ. ಇಷ್ಟಾದಮೇಲೆ ನಿಮಗೇ ಅನಿಸುತ್ತಿದೆಯಲ್ಲವೇ 'ಯೋ ಮಹರಾಯ ಅದ್ಯಾವುದೋ ಪ್ರಾಣಿಯಿರಬೇಕು ನೋಡು! ಸುಮ್ಮನೆ ಅದಿರಬಹುದು ಇದಿರಬಹುದು ಅಂತ ಮೀನಾ-ಮೇಷ ಎಣಿಸಬೇಡಾ...' ಎಂದು ಹೇಳಬೇಕೆಂದು ಎಂದು... ಮುಂದೆಕೇಳಿ, ನಿಮ್ಮ ಈ ಮಾತಿಗೂ ಸಮಜಾಯಿಷಿ ಕೊಡುತ್ತೇನೆ. ನನ್ನ ಅನಿಸಿಕೆ ಈಗ ನಿರ್ಧಾರವಾಗತೊಡಗಿತು, ಇದು ಯಾವುದೋ ಪ್ರಾಣಿಯೇ, ನೆಲದಿಂದ ಅವಿರುವ ಎತ್ತರ, ಒಂದಕ್ಕೊಂದು ಇರುವ ದೂರ ಗಮನಿಸಿ ಲೆಕ್ಕಾಚಾರ ಮಾಡಿ ಇದ್ಯಾವುದೋ ಕಾಡೆಮ್ಮೆಯೋ ಅಥವ ಸಾರಂಗ ಇರಬೇಕು ಎಂದು ನಿರ್ಧರಿಸಿದೆ. ಮುಂದೆಬಂದು ಅದರ ಮೇಲೆ ಬೆಳಕು ಬಿದ್ದಾಗ ಕಂಡದ್ದು... ನಾವೆಣಿಸಿದ ಹಾಗೆ ಆ ಪ್ರಾಣಿ... ಸಾರಂಗ (ಸಾಂಬಾರ್ ಡೀರ್) ಆಗಿತ್ತು. ದೃಢಕಾಯ, ಹಲವು ಕವಲುಗಳೊಡನೆ ಕೊಂಬು ಆ ಕಾಯಕ್ಕೆ ಸುಂದರವಾಗಿಯೇ ಇತ್ತು. ಆ ಹೊಳೆಯುವ ಕಣ್ಣುಗಳು ಇನ್ನೂ ನನ್ನ ಕಣ್ಣಮುಂದೆ ಹಾಗೆಯೇ ಇವೆ. ಈ ಯೋಚನಾ ಕಸರತ್ತೆಲ್ಲಾ ನಡೆದದ್ದು ಸುಮಾರು ಮೂರರಿಂದ ನಾಲ್ಕು ಸೆಕೆಂಡುಗಳಲ್ಲಿ.

ಈಗ ನಿಮ್ಮ ಅನಿಸಿಕೆಗೆ ಬರುತ್ತೇನೆ. ನಾನು ಹಾಗೆ ಮಿಂಚುಹುಳುವಿರಬಹುದು ಪ್ಲಾಸ್ಟಿಕ್ ಇರಬಹುದು ಎಂದುಕೊಳ್ಳಲು ಕಾರಣವಿದೆ. ಈ ಮುಂಚೆಯೇ ಕಾಡಿನಲ್ಲಿ ಬರುವಾಗ ಈ ಮಿಂಚುಹುಳು ಮತ್ತು ಪ್ಲಾಸ್ಟಿಕ್ ಗಳು ಎಷ್ಟೋಬಾರಿ ನನ್ನ ಆಸೆಯನ್ನು ನಿರಾಸೆಗೊಳಿಸಿವೆ. ಈ ಹೊಳೆಯುವ ಮಿಂಚುಹುಳುವನ್ನು ಕಂಡು ಪ್ರಾಣಿಯೆಂದು ಮೋಸಹೋಗಿದ್ದೇನೆ. ಪ್ಲಾಸ್ಟಿಕ್ ಪೇಪರ್ ಅಂತೂ ಇನ್ನೂ ದರಿದ್ರ, ಮಿಂಚುಹುಳುವಾದರೂ ಹಾರಾಡುವುದರಿಂದ



ಇದು ಪ್ರಾಣಿಯಲ್ಲವೆಂದು ಬೇಗ ತಿಳಿದುಬಿಡುತ್ತದೆ. ಆದರೆ ಈ ಪ್ಲಾಸ್ಟಿಕ್ ಅಲುಗಾಡುವುದಿಲ್ಲವಲ್ಲ, ಆದ್ದರಿಂದ ಕೊನೆಯ ಕ್ಷಣದವರೆಗೂ ತಾನು ಪ್ರಾಣಿಯೇ ಎಂದು ನಂಬಿಸುತ್ತದೆ. ಅದಕ್ಕಂದೇ ಮೊದಲಿಗೇ ಇದು ಪ್ರಾಣಿಯೆಂದು ಖುಷಿಯಿಂದ ಹತ್ತಿರ ಹೋಗಿ ನಂತರ ನಿರಾಸೆಯಾಗಬಾರದು ಎಂದು ಮೊದಲೇ ನನ್ನ ಮನಸ್ಸನ್ನು ತಯಾರು ಮಾಡುತ್ತಿದ್ದೆ ಅಷ್ಟೆ. ನಿಜ ಹೇಳಬೇಕೆಂದರೆ ಕಾಡಿನಲ್ಲಿ ಏನೇಕಂಡರೂ ಮೊದಲಿಗೆ ತಲೆಗೆ ಬರುವುದು ಇದು ಯಾವುದೋ ಪ್ರಾಣಿಯೆಂದು, ಆದರೆ ಯಾವ ಪ್ರಾಣಿ ಇರಬಹುದು? ಎಂಬ ಲೆಕ್ಕಾಚಾರ.

ಈ ಮಾಸದ ವಿವಿ ಅಂಕಣದ ಶೀರ್ಷಿಕೆಗೆ ಹೋಲುವಂತೆ ಈ ಹೊಳೆಯುವ ಕಣ್ಣುಗಳ ಸಂಧರ್ಭ ನೆನಪಾಗಿ ಹೇಳಬೇಕೆನಿಸಿತು. ಮುಂದಿನ ವಿಚಾರ ನೇರ ಮುಖ್ಯ ವಿಷಯದ ಕಡೆಗೆ... ಹೊಳೆಯುವ ಕಪ್ಪೆಗಳೆಂದಾಕ್ಷಣ ಕಪ್ಪೆಗಳ

ಕಣ್ಣುಗಳು ರಾತ್ರಿಯಲ್ಲಿ ಹೊಳೆಯುತ್ತವೆ ಎಂದು ತಿಳಿದಿರಿ. ಅಲ್ಲವೇಅಲ್ಲ. ನಾನು ಹೇಳಹೊರಟಿರುವ ಕಪ್ಪೆಗಳು ಹೊಳೆಯುತ್ತವೆ, ಆದರೆ ಮಿಂಚುಹುಳಿವಿನ ಹಾಗೂ ಅಲ್ಲ ಅಥವಾ ಪ್ರಾಣಿಗಳ ಕಣ್ಣುಗಳು ರಾತ್ರಿಯ ಸಮಯದಲ್ಲಿ ಬೆಳಕು ಬಿಟ್ಟರೆ ಹೊಳೆಯುವ ಹಾಗೂ ಅಲ್ಲ. ಈ ಕಪ್ಪೆಗಳ ಮೇಲೆ ನೀಲಿ ಅಥವಾ ಅತಿನೇರಳೆ ಕಿರಣಗಳನ್ನು ಬಿಟ್ಟರೆ ಕೆಲವುಬಣ್ಣ (ಹಸಿರು ಮತ್ತು ಹಳದಿಯ ವಿವಿಧ ಬಣ್ಣ) ಗಳಲ್ಲಿ ಹೊಳೆಯುತ್ತವೆ ಎನ್ನುತ್ತಿದೆ ಹೊಸ ಸಂಶೋಧನೆ. ಜೆನಿಫರ್ ಲ್ಯಾಂಬ್ ಮತ್ತು ಮಾತ್ಯೂ ಡೇವಿಸ್ ಎಂಬ ಜೀವವಿಜ್ಞಾನಿಗಳು ನಡೆಸಿದ ಸಂಶೋಧನೆ ಪ್ರಕಾರ ನೀಲಿ ಮತ್ತು ಅತಿ ನೇರಳೆ ಬಣ್ಣವನ್ನು ಅವರು ಹಾಯಿಸಿದ ಎಲ್ಲಾ ಮೂವತ್ತೆರಡು ಪ್ರಭೇದದ ಕಪ್ಪೆಗಳು ಮತ್ತು ಸಾಲಾಮಂಡರುಗಳು ಆ ಬಣ್ಣಕ್ಕೆ ಪ್ರತಿಫಲಿಸಿ ವಿವಿಧ ಬಗೆಯ ಹಸಿರು ಮತ್ತು ಹಳದಿ ಬಣ್ಣಗಳಲ್ಲಿ ಹೊಳೆಯುತ್ತಿತ್ತು. ಈ ಪ್ರತಿಕ್ರಿಯೆ ಅವರನ್ನೇ ಚಕಿತಗೊಳಿಸಿದೆ. ಏಕೆಂದರೆ ಈ ಹೊಳೆಯುವ ಜೀವಿಗಳ ದಾಖಲೆಗಳು ಇರುವುದು ಸಮುದ್ರದ ಮೀನುಗಳು ಹಾಗೂ ಹವಳಗಳಲ್ಲೇ ಹೆಚ್ಚು. ಉಭಯವಾಸಿಗಳಲ್ಲಿ ಈ ಗುಣ ಇದ್ದರೂ ಕೆಲವೇ ಕೆಲವು ಬಗೆಯ ಸಾಲಾಮಂಡರುಗಳಲ್ಲಿ ಮಾತ್ರ ಕಂಡುಹಿಡಿಯಲಾಗಿತ್ತು ಹಾಗೂ ಉಭಯವಾಸಿಗಳಲ್ಲಿ ಈ ಗುಣ ಅತೀಕಡಿಮೆ ಎಂದು ಪರಿಗಣಿಸಲಾಗಿತ್ತು. ಹೀಗಿರುವಾಗ ಇವರು ಪ್ರಯೋಗಿಸಿದ ಎಲ್ಲಾ ಉಭಯವಾಸಿಗಳು ಹೊಳೆದರೆ ಆಶ್ಚರ್ಯವಾಗದೇ ಇದ್ದೀತೆ? ಅಷ್ಟೇಅಲ್ಲ ಹೆಚ್ಚು ಶಕ್ತಿಯುಳ್ಳ ನೀಲಿಬಣ್ಣವನ್ನು ಹೀರಿಕೊಂಡು ಕಡಿಮೆ ಶಕ್ತಿಯುತ ಹಳದಿ ಬಣ್ಣವನ್ನು ಪ್ರತಿಫಲಿಸುವ ಜೀವಿಯಾಗಿ ಸಮುದ್ರದ ಆಮೆಗಳನ್ನು ಗುರುತಿಸಲಾಗಿತ್ತು. ಆದರೆ ಈಗಿನ ಸಂಶೋಧನೆ ಆ ಗುಣವು ಉಭಯವಾಸಿಗಳಲ್ಲೂ ಸಹ ಸಾಮಾನ್ಯವಾದುದು ಎಂದು ಕೂಗಿಹೇಳುವಂತಿದೆ.

ಜೊತೆಗೆ ಪ್ರತಿ ಬಗೆಯ ಉಭಯವಾಸಿಗಳಲ್ಲೂ ವಿವಿಧ ಮಾದರಿಯ ಚಿತ್ರಗಳು ಮೂಡುತ್ತಿದ್ದವು. ಉದಾಹರಣೆಗೆ ಟೈಗರ್ ಸಾಲಾಮಂಡರುಗಳ ಮೈಮೇಲೆ ಪಟ್ಟೆಗಳ ಹಾಗೆ ಕಂಡರೆ, ಮಾರ್ಬಲ್ಸಾಲಮಂಡರುಗಳಲ್ಲಿ ಅವುಗಳ ಮೂಳೆಗಳು ಹಾಗು ಹೊಟ್ಟೆಯ ಭಾಗವು ಹೊಳೆಯುತ್ತಿದ್ದವಂತೆ. ಈ ಹೊಳೆಯುವಿಕೆಗೆ ನಿರ್ದಿಷ್ಠ ಕಾರಣ ಈ ಸಂಶೋಧನೆಯಲ್ಲಿ ಮಾಡಿಲ್ಲವಾದರೂ ಇದಕ್ಕೆ ಕಾರಣ ಬಹುಶಃ ಅವುಗಳ ಚರ್ಮದ ಜೀವಕೋಶಗಳಲ್ಲಿ ಇರಬಹುದಾದ ಹೊಳೆಯುವ ಪ್ರೊಟೀನ್ ಗಳು (ಅಥವಾ ಪಿಗ್ಮೆಂಟ್ ಗಳು) ಎಂದು ಹೇಳಬಹುದು.



ಹಾಗಾದರೆ, ಈ ಹೊಳೆಯುವ ಗುಣ ಅಥವಾ ಲಕ್ಷಣಗಳಿಂದ ಈ ಕಪ್ಪೆ-ಸಾಲಮಂಡರುಗಳಿಗೆ ಹೇಗೆ ಉಪಯೋಗವಾಗುತ್ತದೆ? ಎಂಬುದಲ್ಲವೇ ನಿಮ್ಮ ಪ್ರಶ್ನೆ. ಇಲ್ಲಿದೆ ನೋಡಿ, ಕಪ್ಪೆಗಳ ಕಣ್ಣುಗಳು ಹಸಿರು ಮತ್ತು ನೀಲಿ ಬಣ್ಣಗಳನ್ನು ಗ್ರಹಿಸುವ ವಿಶೇಷ ಜೀವಕೋಶಗಳನ್ನು ಹೊಂದಿವೆ. ಹೀಗೆ ಹಸಿರು ಹಳದಿ ಬಣ್ಣಗಳಲ್ಲಿ ಹೊಳೆಯುವುದರಿಂದ ಕಪ್ಪೆಗಳು ಹಾಗು ಸಾಲಾಮಂಡರುಗಳು ನಮಗೆ ಅಡಗಿರುವಂತೆ ಕಾಣುವ ಸುತ್ತಮುತ್ತಲಿನ ತನ್ನ ಸಂಗಾತಿಗಳನ್ನು ಹುಡುಕಲು ಹೆಚ್ಚು ಸಹಾಯಕವಾಗಬಹುದು. ಹಾಗೆಯೇ ಈ ಗುಣ ನಮ್ಮ ವಿಜ್ಞಾನಿಗಳು ವನ್ಯಜೀವಿಗಳ ಗಣತಿ ಮಾಡುವಾಗ ಅಡಗಿರುವ ಇವುಗಳನ್ನು ಗುರುತಿಸಿ ದಾಖಲಿಸಲು ಉಪಕಾರಿಯಾಗುವುದು. ಇವು ನಮ್ಮ ಉತ್ತರಗಳು… ನಿಮ್ಮ ಉತ್ತರಗಳ ನಮಗೆ ಬರೆದು/ಟೈಪ್ ಮಾಡಿ ಈ ಕೆಳಗಿನ ಇ-ಮೇಲ್ ವಿಳಾಸಕ್ಕೆ ಕಳುಹಿಸಿ.

ಇ-ಮೇಲ್ ವಿಳಾಸ: kaanana.mag@gmail.com

*



# ಯುಗಾದಿ

ಬಂದಿತು ನವಸಂವತ್ಸರವು

ತಂದಿತು ಹಸಿರ ಚಿಗುರಿನ ಚಿತ್ತಾರವು

ಕಣ್ಮನ ತಣಿಸುವ ವಾತಾವರಣವು

ಭೂರಮೆಗೆ ದೇವರು ಕೊಟ್ಟ ವರವು

ಎಲ್ಲೆಲ್ಲೊ ತುಂಬಿಹುದು ಚಿಗುರು

ಪ್ರಕೃತಿಯ ಮೈದುಂಬಿಕೊಂಡಿದೆ ಹಸಿರು

ನಿಸರ್ಗವು ಹೊಸ ಉಡುಪು ತೊಟ್ಟಂತೆ

ಶೃಂಗಾರದಲಿ ನನಗ್ಯಾರು ಸಮ ಅಂದಂತೆ

ಕಂಗೊಳಿಸಿಹುದು ನೋಡು

ವನದೇವಿಯ ಸೊಬಗು

ಮೇಳೈಸಿದೆ ಪ್ರಕೃತಿಯ

ಸೌಂದರ್ಯದ ಮೆರುಗು

ನಿಸರ್ಗವ ಕಂಡು ಹಕ್ಕಿಗಳ

ಚಿಲಿಪಿಲಿಯ ಸಂವಾದ

ಕಾಣದೆ ಮರೆಯಲಿ ಕುಳಿತು

ಕೋಗಿಲೆಯ ಇಂಪಾದ ನಾದ

- ಜನಾರ್ದನ ಗೊರ್ಟೆ

# ಪ್ರಕೃತಿ ಬಿಂಬ



**ನೀಲಿ ಹುಲಿ ಚಿಟ್ಟೆ** **© ಭಗವತಿ ಬಿ. ಎಮ್.**

ದಕ್ಷಿಣ ಏಷ್ಯಾದಲ್ಲಿ ಕಂಡು ಬರುವ ಈ ನೀಲಿ ಹುಲಿ ಚಿಟ್ಟೆಗಳ ರೆಕ್ಕೆಯ ಮೇಲ್ಭಾಗವು ನೀಲಿ ಹಾಗು ಗಾಢಕಪ್ಪು ಗೆರೆಗಳಿಂದ ಕೂಡಿದ್ದು, ತನ್ನ ಹಾರಾಟಕ್ಕೆ ಅನುಕೂಲವಾಗುವಂತೆ ಸೂರ್ಯನಿಂದ ಶಾಖವನ್ನು ನೇರವಾಗಿ ತಮ್ಮ ರೆಕ್ಕೆಗಳ ಮೂಲಕ ಹೀರಿಕೊಳ್ಳುತ್ತವೆ. ರೆಕ್ಕೆಗಳ ಮೇಲ್ಮೈಯಲ್ಲಿರುವ ಕಪ್ಪು ಪ್ರದೇಶಗಳು ಶಾಖ ಹೀರಿಕೊಳ್ಳುವ ಪ್ರದೇಶಗಳಾಗಿವೆ, ಅದು ಸ್ವತಂತ್ರವಾದ ಹಾರಾಟಕ್ಕೆ ಅನುಕೂಲವಾಗುತ್ತದೆ. ಕಾಕ (ಕ್ರೋಸ್) ಮತ್ತು ಹುಲಿ (ಟೈಗರ್ಸ್) ಪ್ರಭೇದದ ಈ ಚಿಟ್ಟೆಯು **ಕುಚ್ಚು ಪಾದದ (ಬ್ರಷ್ ಫೂಟೆಡ್)** ಚಿಟ್ಟೆಗಳ ಕುಟುಂಬಕ್ಕೆ ಸೇರುತ್ತವೆ. ಸಣ್ಣ ಕಂಬಳಿ ಹುಳುಗಳು ಮೊಟ್ಟೆಯಿಂದ ಹೊರಬಂದಾಗ ಸುಮಾರು 1.5 ಸೆಂ.ಮೀ ಉದ್ದವಿರುತ್ತದೆ. ಅದೇ ನಲವತ್ತೆಂಟು ಗಂಟೆಗಳಲ್ಲಿ ನಾಲ್ಕರಿಂದ ಐದುಪಟ್ಟು ಗಾತ್ರ ಹೆಚ್ಚುತ್ತವೆ. ಈ ಪ್ರಭೇದದ ಕಂಬಳಿ ಹುಳು (ಲಾರ್ವಾ)ಗಳು ಸಾಮಾನ್ಯವಾಗಿ ಮಿಲ್ಕ್ ವೀಡ್ (Asclepiadaceae) ಕುಟುಂಬದ ಸಸ್ಯಗಳನ್ನು ತಿನ್ನುತ್ತವೆ. ಉದಾಹರಣೆಗೆ: ಎಕ್ಕದ ಗಿಡ (Calotropis), ಹೆಗಲ ಸಪ್ಪು (Dregea Volubilis), ಕಡಹಾಲೆ ಬಳ್ಳಿ (Marsdenia roylei), ವಿಷತೀಟೆ (Marsdenia tenacissima), ಬುಡಬುಡಕೆ ಕಾಯಿ (Crotalaria alata) ಮತ್ತು ಗಿಲಿಗಿಲಿ ಗಿಡ (Crotalaria albida).




**ಹುಲಿ ಚಿಟ್ಟೆ** **© ಭಗವತಿ ಬಿ. ಎಮ್.**

ನೀಲಿ ಹುಲಿ ಚಿಟ್ಟೆಯ ಹಾಗೆಯೇ **ಹುಲಿ ಚಿಟ್ಟೆ** (ಪ್ಲೇನ್ ಟೈಗರ್) ಚಿಟ್ಟೆಯೂ ಕೂಡ ಕಾಕ (ಕ್ರೋಸ್) ಮತ್ತು ಹುಲಿ (ಟೈಗರ್ಸ್) ಪ್ರಭೇದದ ಈ ಚಿಟ್ಟೆಯು **ಕುಚ್ಚು ಪಾದದ** (ಬ್ರಷ್ ಫೂಟೆಡ್) ಚಿಟ್ಟೆಗಳ ಕುಟುಂಬಕ್ಕೆ ಸೇರುತ್ತವೆ. ಏಷ್ಯಾ, ಆಸ್ಟ್ರೇಲಿಯಾ ಮತ್ತು ಆಫ್ರಿಕಾದಲ್ಲಿ ವ್ಯಾಪಕವಾಗಿ ಹರಡಿರುವ ಮಧ್ಯಮ ಗಾತ್ರದ ಚಿಟ್ಟೆಯಾಗಿದ್ದು, ಇದನ್ನು ಆಫ್ರಿಕನ್ ರಾಣಿ ಎಂದು ಕೂಡ ಕರೆಯಲಾಗುತ್ತದೆ. ಹುಲಿ ಚಿಟ್ಟೆ ಬಣ್ಣವನ್ನು ಇತರ ಜಾತಿಯ ಚಿಟ್ಟೆಗಳು ವ್ಯಾಪಕವಾಗಿ ಅನುಕರಿಸುತ್ತವೆ. ಇವುಗಳು ವಿವಿಧ ರೀತಿಯ ಆವಾಸ ಸ್ಥಾನಗಳಲ್ಲಿ ವಾಸಿಸುತ್ತದೆ, ಆದರೆ ಇದರ ಅಭಿವೃದ್ಧಿಯು ಕಾಡಿನಂತಹ ಪ್ರದೇಶಗಳಲ್ಲಿ ಕಡಿಮೆ ಮತ್ತು ಹೆಚ್ಚಾಗಿ ಒಣ, ವಿಶಾಲ-ತೆರೆದ ಪ್ರದೇಶಗಳಲ್ಲಿ ಕಂಡುಬರುತ್ತದೆ. ಹುಲಿ ಚಿಟ್ಟೆಗಳು ವಿವಿಧ ಹೂ ಬಿಡುವ ಸಸ್ಯಗಳಿಂದ ಮಕರಂದವನ್ನು ಪಡೆಯುತ್ತವೆ. ಇವುಗಳು ಋತುಮಾನಗಳಿಗನುಸಾರವಾಗಿ ಬದಲಾಗುತ್ತವೆ. ಏಕೆಂದರೆ ಇವುಗಳು ಅವಲಂಬಿಸಿರುವ ಸಸ್ಯಗಳು ವರ್ಷವಿಡೀ ಹೂ ಬಿಡುವುದಿಲ್ಲವಾದ್ದರಿಂದ, ಈ ಪ್ರಭೇದದ ಕಂಬಳಿ ಹುಳುಗಳು ಸಾಮಾನ್ಯವಾಗಿ ಅಸ್ಕ್ಲೆಪಿಯಾಸ್ಕುಲದ (ಹೊಳೆ ಚದರಂಗ) ಸಸ್ಯಗಳನ್ನುಸೇವಿಸುತ್ತವೆ. ಭಾರತದಲ್ಲಿ ಇವುಗಳು ಈ ಬಗೆಯ ಸಸ್ಯಗಳನ್ನು ಅವಲಂಬಿಸಿವೆ: ನಿತ್ಯಪುಷ್ಪ (Catharanthus roseus), ಲಂಟಾನ (Lantana camara), ಕರೆವ್ಯಾದಿ (Vernonia cinerea), ಮೂಗುತಿ ಗಿಡ (Asystasia gangetica) ಮತ್ತು ಗಂಟೆ ಹೂ (Tecoma stans).



**ಪಟ್ಟೆ ಹುಲಿ ಚಿಟ್ಟೆ** © ಭಗವತಿ ಬಿ. ಎಮ್.

ಎಲ್ಲಾ ರೀತಿಯ ಕಾಕ (ಕ್ರೋಸ್) ಮತ್ತು ಹುಲಿ (ಟೈಗರ್ಸ್) ಪ್ರಭೇದದ **ಕುಚ್ಚು ಪಾದದ** (ಬ್ರಷ್ ಫೂಟೆಡ್) ಚಿಟ್ಟೆಗಳ ಕುಟುಂಬಕ್ಕೆ ಸೇರುವ ಸಾಮಾನ್ಯ ಹುಲಿ(ಸ್ಟ್ರೈಪಡ್ ಟೈಗರ್)ಯು ಅಮೇರಿಕದ ಮೊನಾರ್ಕ್ ಚಿಟ್ಟೆಯನ್ನು ಹೋಲುತ್ತದೆ. ರೆಕ್ಕೆಗಳ ಅಂಚುಗಳು ಎರಡು ಸಾಲುಗಳ ಬಿಳಿಚುಕ್ಕೆಗಳೊಂದಿಗೆ ಕಪ್ಪುಬಣ್ಣದ್ದಾಗಿರುತ್ತವೆ. ರೆಕ್ಕೆಗಳ ಕೆಳಭಾಗವು ಮೇಲ್ಭಾಗವನ್ನು ಹೋಲುತ್ತದೆ, ಆದರೆ ಬಣ್ಣಗಳಿಂದ ಕೂಡಿರುತ್ತದೆ. ಭಾರತ, ಶ್ರೀಲಂಕಾ, ಮ್ಯಾನ್ಮಾರ್, ಆಗ್ನೇಯಏಷ್ಯಾ ಮತ್ತು ಆಸ್ಟ್ರೇಲಿಯಾದ್ಯಂತ ವಿಸ್ತರಿಸಲಾಗಿದೆ. ಹೆಚ್ಚಾಗಿ ಈ ಚಿಟ್ಟೆಗಳು ಮಧ್ಯಮ ಮತ್ತು ಭಾರೀಮಳೆಯ ಪ್ರದೇಶಗಳಿಗೆ ಆದ್ಯತೆ ನೀಡುತ್ತದೆ. ಅದಲ್ಲದೆ ತೇವಾಂಶವುಳ್ಳ ಒಣ ಎಲೆ ಉದುರುವ ಕಾಡುಗಳಲ್ಲಿಯೂ ಕೂಡ ಕಂಡುಬರುತ್ತವೆ. ಇವುಗಳು ತಾವು ಅವಲಂಬಿಸಿರುವ ಸಸ್ಯಗಳ ಎಲೆಗಳ ಕೆಳಗೆ ಮೊಟ್ಟೆ ಇಡುತ್ತದೆ. ಕಂಬಳಿ ಹುಳು (ಲಾರ್ವ)ಗಳನ್ನು ಕಪ್ಪು, ಹಳದಿ ಮತ್ತು ನೀಲಿ-ಬಿಳಿಕಲೆಯ ರೇಖೆಗಳಿಂದ ಗುರುತಿಸಲಾಗುತ್ತದೆ. ಹುಟ್ಟಿದ ಕಂಬಳಿ ಹುಳುಗಳು ಮೊಟ್ಟೆಯ ಮೇಲ್ಪದರವನ್ನು ತಿಂದನಂತರ ಎಲೆಯನ್ನು ತಿಂದು ಹಸಿರು ಮತ್ತು ಹಳದಿ ಬಣ್ಣದ ಪೊರೆಹುಳು (ಪ್ಯೂಪಾ)ದಿಂದ ಚಿಟ್ಟೆಯಾಗಿ ಹೊರಬರುವುದನ್ನು ಕಾಣಬಹುದು. ಅವಲಂಬಿತ ಸಸ್ಯಗಳು ಹೊಳೆ ಚದರಂಗ (Asclepias curassavica), ಹಲ್ಲುಕ (Ceropegia bulbosa), ಜಾತಿಲಿ (Ceropegia juncea), ಬಿತ್ತರಿಗೆ (Ceropegia tuberosa), ಕೋಡುಮುರ್ಕ ಬಳ್ಳಿ (Cynanchum tunicatum) ಮತ್ತು ಆಡುಮುಟ್ಟದ ಬಳ್ಳಿ (tylophora indica).



ಮಾಸಲು ಚಿಟ್ಟೆ © ಭಗವತಿ ಬಿ. ಎಮ್.

**ಮಾಸಲು ಚಿಟ್ಟೆ (**ಕಾಮನ್ ಗಲ್) ಚಿಟ್ಟೆಯು ಹಳದಿ ಮತ್ತು ಬಿಳಿಯ ಪ್ರಭೇದದ ಪಿಯರಿಡೆ ಕುಟುಂಬದ ಸಣ್ಣ ಚಿಟ್ಟೆಯಾಗಿರುತ್ತದೆ. ಇದು ಭಾರತ, ಶ್ರೀಲಂಕಾ, ಚೀನಾ, ಆಗ್ನೇಯ ಏಷ್ಯಾ ಮತ್ತು ಇಂಡೋನೇಷ್ಯಾಗಳಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ಗಂಡು ಚಿಟ್ಟೆಯ ಮೇಲ್ಭಾಗವು ಬಿಳಿ ಹಾಗು ರೆಕ್ಕೆಗಳ ಬುಡದಲ್ಲಿ ಮತ್ತು ರಕ್ತನಾಳಗಳ ಉದ್ದಕ್ಕೂ ಬೂದು-ನೀಲಿ, ಕೆಳಭಾಗದಲ್ಲಿ ಕಪ್ಪುಗುರುತುಗಳಿಂದಾಗಿ ಕೂಡಿರುತ್ತದೆ. ಹೆಣ್ಣುಚಿಟ್ಟೆಗಳು ಗಂಡನ್ನೇ ಹೋಲುತ್ತವೆ, ಆದರೆ ಕಪ್ಪು ರೇಖೆಗಳು ಸ್ವಲ್ಪ ದೊಡ್ಡದಾಗಿ ಮತ್ತು ಇನ್ನು ಗಾಢವಾಗಿರುವುದು ಕಾಣುತ್ತದೆ. ಇದರ ಲಾರ್ವವು ಬಿಳಿಚುಕ್ಕೆ ಹಾಗು ಗೆರೆಗಳಿಂದ ಕಾಣುತ್ತವೆ ಮತ್ತು ಪ್ಯೂಪವು ಹಸಿರು ಬಣ್ಣದ್ದಾಗಿರುತ್ತದೆ. ಈ ಪ್ರಭೇದದ ಕಂಬಳಿ ಹುಳು (ಲಾರ್ವಾ)ಗಳು ಸಾಮಾನ್ಯವಾಗಿ ಕ್ಯಾಪರೇಸಿ ಕುಟುಂಬದ ಸಸ್ಯಗಳನ್ನು ತಿನ್ನುತ್ತವೆ. ಉದಾಹರಣೆಗೆ: ಮರಗಡೆ (Cadaba fruticose) ಮತ್ತು ಬಲಯ (Cadaba trifoliata).

**ಛಾಯಾಚಿತ್ರಗಳು: ಭಗವತಿ ಬಿ. ಎಮ್.**

**ಲೇಖನ: ಧನರಾಜ್ ಎಂ.**

# ನೀವೂ ಕಾನನಕ್ಕೆ ಬರೆಯಿರಿ...

**ವಿಶ್ವ ಜೀವವೈವಿಧ್ಯ ದಿನ, ಮೇ 22**

ಜೀವಿ ಎಂದಾಕ್ಷಣ ನೆನಪಿಗೆ ಬರುವುದು ಭೂಮಿ. ಸೌರಮಂಡಲದಲ್ಲಿ ಇದೊಂದು ಗ್ರಹದಲ್ಲಿ ಮಾತ್ರ ಜೀವಿಗಳು ಕಾಣಸಿಗುವುದು. ಹಾಗಾದರೆ ಭೂಮಿಯ ಮೇಲೆ ಒಟ್ಟು ಎಷ್ಟು ಜೀವಿಗಳು ಇರಬಹುದು ಎಂಬ ಪ್ರಶ್ನೆಯ ಬೆನ್ನತ್ತಿ ವಿಜ್ಞಾನಿಗಳು ಶತಮಾನದಿಂದಲೂ ಅಧ್ಯಯನ ನಡೆಸುತ್ತಲೇ ಇದ್ದು, ಇರುವೆ ಗಾತ್ರದ ಜೀವಿಯಿಂದ ಹಿಡಿದು ಡೈನೋಸಾರ್ ಗಳಂತಹ ದೈತ್ಯಜೀವಿಗಳ ಜೀವವಿಕಾಸದ ಬಗೆಗಿನ ಕೌತುಕಗಳ ಬಗ್ಗೆ ಬೆರಗಾಗುತ್ತಾ, ತಿಳಿಯುತ್ತ, ತಿಳಿಸುತ್ತಾ ಬಂದಿದ್ದಾರೆ. ಅಗೆದಷ್ಟು ಸಿಗುವಂತೆ ಜೀವಿಗಳ ಬಗೆಗಿನ ಸತ್ಯಗಳು ದಿನೇದಿನೇ ಹೊರಬೀಳುತ್ತಿದ್ದು, ಸಸ್ಯಗಳು, ಪ್ರಾಣಿಗಳು, ಸೂಕ್ಷ್ಮಜೀವಿಗಳು, ಬೇರೆಬೇರೆ ಆವಾಸಗಳಲ್ಲಿ ಬೇರೆಬೇರೆ ಪ್ರಭೇದಗಳ ರೂಪದಲ್ಲಿ ಕಾಣಸಿಗುವುದನ್ನು ಜೀವವೈವಿಧ್ಯ ಎನ್ನುತ್ತಾರೆ.

ಹೀಗೆ ನಾನಾ ರೀತಿಯ ಜೀವವೈವಿಧ್ಯತೆಗಳು ಊಹೆಗೂ ನಿಲುಕದಷ್ಟು ಹೇರಳವಾಗಿವೆ. ಉಳಿವಿಗಾಗಿ ಹೋರಾಟ ನಡೆಸಿ, ಅಸ್ತಿತ್ವ ಹೊಂದಿ, ಬದುಕಿಗಾಗಿ ಪರಸ್ಪರಾವಲಂಬನೆ ಹೊಂದಿರುವ ಇಡೀ ಜೀವವ್ಯವಸ್ಥೆ, ಒಂದಲ್ಲ ಒಂದು ರೀತಿ ಪ್ರತಿಯೊಂದು ಜೀವಿಗೂ ಕೊಂಡಿಯಂತೆ ಬೆಸೆದುಕೊಂಡಿದೆ. ಈ ಕೊಂಡಿಯಲ್ಲಿ ಒಂದೇಒಂದು ಚಿಕ್ಕಜೀವಿ ಅಳಿದರೂ ಇತರ ಎಲ್ಲ ಜೀವಿಗಳು ನಾಶವಾಗುತ್ತವೆ. ಇಂತಹ ಜೀವವೈವಿಧ್ಯವು ಬೇರೆಬೇರೆ ಕಾರಣಗಳಿಂದ ಕಡಿಮೆಯಾಗುತ್ತಿದ್ದು, ಜೀವವೈವಿಧ್ಯದ ಬಗೆಗಿನ ಮಹತ್ವ ಮತ್ತು ಸಂರಕ್ಷಣೆಯ ಬಗ್ಗೆ ಅರಿವು ಮೂಡಿಸಲು ಮೇ 22ರಂದು ವಿಶ್ವ ಜೀವವೈವಿಧ್ಯ ದಿನವನ್ನು ಆಚರಿಸಲಾಗುತ್ತದೆ.

ಮೇ ತಿಂಗಳ ಸಂಚಿಕೆಗೆ ಜೀವ ವೈವಿದ್ಯತೆ ಕುರಿತ, ಕಾಡು, ಕಾಡಿನ ಕತೆಗಳು, ಜೀವ ವಿಜ್ಞಾನ, ವನ್ಯ ವಿಜ್ಞಾನ, ಕೀಟಲೋಕ, ಕೃಷಿ, ವನ್ಯಜೀವಿ ಛಾಯಚಿತ್ರಗಳು, ಕವನ (ಪರಿಸರಕ್ಕೆ ಸಂಬಂಧಿಸಿದ), ವರ್ಣಚಿತ್ರಗಳು ಮತ್ತು ಪ್ರವಾಸ ಕತೆಗಳು, ಪರಿಸರಕ್ಕೆ ಸಂಬಂಧ ಪಟ್ಟ ಎಲ್ಲಾ ಲೇಖನಗಳನ್ನು ಆಹ್ವಾನಿಸಲಾಗಿದೆ. ಇ-ಮೇಲ್ ಮೂಲಕ ಕಳಿಸಬಹುದು.

**ಈ ಕೆಳಗಿನ ಇ-ವಿಳಾಸಕ್ಕೆ ಲೇಖನಗಳನ್ನು ಇದೆ ಮೇ ತಿಂಗಳ ದಿನಾಂಕ 5 ರೊಳಗೆ ನಿಮ್ಮ ಹೆಸರು ಮತ್ತು ವಿಳಾಸದೊಂದಿಗೆ ಕಳುಹಿಸಿ.** ಇ-ಮೇಲ್ ವಿಳಾಸ: kaanana.mag@gmail.com



**22 MAY 2020**
**INTERNATIONAL DAY FOR BIOLOGICAL DIVERSITY**
**Our solutions are in nature**